ದಿ|| ಕಾಕೋಳು ಅನಂತರಾಯರ ಸ್ಮಾರಕ ಗ್ರಂದಮಾಲೆ ಬೆಳ್ಳಿಹಬ್ಬದ ಪ್ರಕಟಣೆ

# ಹೆಳವನಕಟ್ಟೆ ಗಿರಿಯಮ್ಮ

ಕಾಕೋಳು ಸರೋಜಾರಾವ್

ಪ್ರಕಾಶಕರು
ಚಂದ್ರಿಕಾ ಪ್ರಕಾಶನ,
22 ಪಿಟೀಲು ಚೌಡಯ್ಯರಸ್ತೆ, 6ನೇ ದೇವಾಲಯದ ರಸ್ತೆ, 16ನೇ ಅಡ್ಡರಸ್ತೆ,
ಮಲ್ಲೇಶ್ವರ, ಬೆಂಗಳೂರು – 560 003

**HELAVANAKATTE GIRIYAMMA** A book in Kannada by Kakolu Saroja Rao Published by Chandrika Prakashana 22 16th Cross 6th Temple Street, Peteelu Chowdaiah Road Malleswaram, Bangalore - 3

Edition 1994



ಮುದ್ರಣ ೧೯೯೪

ಬೆಲೆ ಮೂವತ್ತೈದು ರೂಪಾಯಿ

ರೂ. ೩೫-೦೦

ಪ್ರತಿಗಳು ದೊರೆಯುವ ಸ್ಥಳ ಡಿ ವಿ ಕೆ ಮೂರ್ತಿ, ಮೈಸೂರು - ೪

ಮುಖಚಿತ್ರ ಚಂದ್ರನಾಥ್

ಮುದ್ರಕರು
ಲಕ್ಷ್ಮಿ ಮುದ್ರಣಾಲಯ
ಬೆಂಗಳೂರು - ೧೮
ದೂರವಾಣಿ ೬೬೧೩೧೨೩

# ಕಾಕೋಳು ಸರೋಜಾರಾವ್ ಅವರ ಕೃತಿಗಳು

## ಕಾದಂಬರಿಗಳು

ನಿಶ್ಚಿತಾರ್ಥ
ಬಾಳ ಹೊಂಬಾಳೆ*
ಎರಡು ಮನೆ
ಚಿಗುರೆಲೆ ಬಾಡಿದಾಗ
ಅವಳ ಹೆಜ್ಜೆ
ಪ್ರೇಮ ದೋಣಿ
ಮಾಗಿಯ ಕನಸು*
ಚಿರವಿರಹಿ
ಹೊನ್ನಿನ ಹಂಬಲ
ವಿಜಯ ಹಸ್ತ
ಕೆಸರು ಮೊಸರು
ತಾಯಿ ನೆರಳು
ಬಳ್ಳಿ ಹಬ್ಬಿದಾಗ
ಶರಣಾಗತ
ಪರ್ವಕಾಲ—ಮಂಗಳೋದಯ
ಶ್ರಾವಣ ಸಂಧ್ಯಾ
ಹೆಳವನಕಟ್ಟೆ ಗಿರಿಯಮ್ಮ
ಮಂಗಳವಾದ್ಯ
ಹೃದಯ ಸಂಗಮ
ಸ್ವರ್ಗದ ಬಾಗಿಲು
ಹೆಜ್ಜೆ ಗೆಜ್ಜೆ
ಮೌನ ಗೀತೆ
ಮುಸುಕು (ಸಂಯುಕ್ತ)*
ದೂರದ ಆಸೆ
ಬೆಳಕು ಹರಿದಾಗ
ಮನೆ ಬೆಳಕು
ಪಂಜರದ ಬಾಳು
ಮಾತುಕೊಟ್ಟವಳು
ನೆರಳು
ಮರಳಿ ಮಣ್ಣಿಗೆ
ಗುಪ್ತಗಾಮಿನಿ
ಉಪಕಾರಿ
ಮನಸ್ಸು ಮಲ್ಲಿಗೆ
ಬಾಳಿದ ಮನೆ
ಮೋಹದ ಬಲೆ
ಸಿಂಹಾದ್ರಿ
ಹೇಮಗಂಗಾ
ದೆವ್ವದ ಮನೆ
ಹೇಮಾವತಿ—ಮನೆಸೊಸೆ
ನನ್ನ ತಂಗಿ
ಅವಳ ಮಗ
ಆಶ್ರಯ—ಅಮೃತದಾರೆ
ದೇವರ ಗೊಂಬೆ
ಕುಂಕಮ ಬಲ
ಬಲಿದಾನ
ಶ್ರಾವಣಸಂಧ್ಯಾ
ಮಾಂಗಲ್ಯ ಮಾಲೆ*
ಕಣ್ಣಾಮುಚ್ಚಾಲೆ
ಇಂದ್ರಜೀತ್ (ಮತ್ಸರ)*
ಕರುಣಾಮಯಿ*
ವಿಜೇತ

## ನಾಟಕಗಳು

ರೂಪಶಿಲ್ಪ (ಜಾನಪದ
ಕರ್ನಾಟಕ ರಮಾರಮಣ (ಚಾರಿತ್ರಿಕ)
ಅದೃಷ್ಟ ಲಕ್ಷ್ಮಿ (ಹಾಸ್ಯನಾಟಕ)
ಬಂಜೆ (ವೈಚಾರಿಕ)

---

* ಚಿತ್ರೀಕರಣವಾಗಿದೆ

# ಅರಿಕೆ

ಬರತಖಂಡದ ಬವ್ಯಬವಿಷ್ಯದ ಬರವಸೆಯಾಗಿ ಬಾಗ್ಯದ ಬಂಡಾರವನ್ನು ಕನ್ನಡ ಸಾಹಿತ್ಯಕ್ಕೆ ತನ್ನ ಬಕ್ತಿ ಸ್ವರೂಪದ ಕೃತಿಗಳನ್ನು ಅರ್ಪಿಸಿದ ದಾಸಸಾಹಿತ್ಯದ ಮಹಿಳಾ ಕವಯಿತ್ರಿ 'ಹೆಳವನಕಟ್ಟೆ ಗಿರಿಯಮ್ಮ'ನ ಸಂಕ್ಷಿಪ್ತ ಜೀವನ ಕೃತಿಯನ್ನು ರಚಿಸಿದ್ದೇವೆ

ಚಿಕ್ಕತನದಲ್ಲಿ ನಮ್ಮ ತಾತಂದಿರಾದ ಕೊಮ್ಮನ ಹಳ್ಳಿ ಉಗ್ರಾಚಾರ್ಯರು ನನಗೆ ದಾಸಸಾಹಿತ್ಯದ ಬಗ್ಗೆ ಶ್ರಮಿಸಿದ ಮಹಾನ್ ಯೋಗಿವರ್ಯರ ಜೀವನ ಚರಿತ್ರೆಯನ್ನು ತಿಳಿಸಿ ನನ್ನ ಆಸಕ್ತಿಯನ್ನು ಕೆರಳಿಸಿದರು ಅವರ ಆಶೀರ್ವಾದದೊಂದಿಗೆ, ಹಾಗೂ ಕಾಕೋಳು ಶ್ರೀ ವೇಣುಗೋಪಾಲಸ್ವಾಮಿಯ ಅನುಗ್ರಹದಿಂದ ಈ ಕೃತಿ ಜನ್ಮ ತಳೆದಿದೆ

ಸುಮಾರು ಮೂವತ್ತು ವರ್ಷಗಳಿಂದಲೂ ಹೆಳವನ ಕಟ್ಟೆ ಗಿರಿಯಮ್ಮನವರ ಜೀವನ ಚರಿತ್ರೆಯನ್ನು ಬರೆಯುವ ಹಂಬಲದಿಂದ, ಅವರ ಬಗ್ಗೆ ಮಾಹಿತಿ ಸಂಗ್ರಹಿಸಲು, ಅನೇಕ ವಿದ್ವಾಂಸರುಗಳನ್ನು ಅವರ, ಕೃತಿಗಳ, ಶೇಖರಣೆಗಾಗಿ ಅವರ ಹಾಡುಗಳನ್ನು ಹೇಳುವ ಮಹಿಳೆಯರನ್ನು ಹೆಳವನಕಟ್ಟೆ ಗಿರಿಯಮ್ಮನವರ ವಂಶಸ್ಥರನ್ನು ಸಂಪರ್ಕಿಸಿ ಲೇಖನಗಳನ್ನು ಸಿದ್ಧಪಡಿಸಿ ಪ್ರಕಟಿಸಿದ್ದು ಅನಂತರದಲ್ಲಿ ಈ ವಿಷಯದ ಬಗ್ಗೆ ನಾನು ಬಿತ್ತರಿಸಿದ ಉಪನ್ಯಾಸ ಮಾಲೆಯನ್ನು ಒಟ್ಟುಗೂಡಿಸಿ, ಹೆಳವನಕಟ್ಟೆ ಗಿರಿಯಮ್ಮನ ಜೀವನ ಚರಿತ್ರೆಯನ್ನು ಪುಸ್ತಕ ರೂಪದಲ್ಲಿ ತಯಾರು ಮಾಡಿದೆ

ಈ ಕೃತಿಯೊಂದಿಗೆ ಶ್ರೀ ಕಾಕೋಳು ವೇಣುಗೋಪಾಲ ಸ್ವಾಮಿಯನ್ನು ಕುರಿತು ನಾನು ರಚಿಸಿದ ದೇವರನಾಮಗಳನ್ನು ಸೇರಿಸಿದ್ದೇನೆ

ಹೆಳವನಕಟ್ಟೆ ಗಿರಿಯಮ್ಮನವರ ಚರಿತ್ರೆಯನ್ನು ಬರೆದು ಶ್ರೀ ಶ್ರೀನಿವಾಸ ಹಾವನೂರು ಇವರ ಕೈಗಿತ್ತು ಮುನ್ನುಡಿಯನ್ನು ಬರೆದು ಕೊಡಬೇಕೆಂದು ಕೋರಿದಾಗ ಅವರು ಅಬಿಮಾನದಿಂದ ಮುನ್ನುಡಿಯನ್ನಿತ್ತಿದ್ದಾರೆ ಇವರಿಗೆ ನನ್ನ ಹೃತ್ಪೂರ್ವಕ

ವಂದನೆಗಳು ಈ ಕೃತಿಯನ್ನು ಓದಿ ಆದಕ್ಕೆ ಆಶೀರ್ವಚನದೊಡನೆ, ಮುನ್ನುಡಿಯನ್ನು ಬರೆದುಕೊಟ್ಟ ಮಹಾಮಹರ್ಷಿಗಳಾದ ಶ್ರೀ ಶ್ರೀ ಪೇಜಾವರ ಮಠಾಧೀಶ್ವರಾದ ಶ್ರೀ ಶ್ರೀ ವಿಶ್ವೇಶ್ವತೀರ್ಥ ಶ್ರೀ ಪಾದಂಗಳವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು

ದಾಸಸಾಹಿತ್ಯದ ಹಿರಿಯವ್ಯಕ್ತಿಗಳಾದ ಶ್ರೀ ವೇಣುಗೋಪಾಲದಾಸರು ನನಗೆ ಸೂಕ್ತ ಸಲಹೆಗಳನ್ನಿತ್ತಿದ್ದಾರೆ ಅವರಿಗೆ ನನ್ನ ನಮಸ್ಕಾರಗಳು

ಈ ಕೃತಿಯನ್ನು ಪ್ರಕಟಿಸಿದ ಪ್ರಕಾಶಕರಿಗೂ, ಮುದ್ರಕರಿಗೂ ಹಾಗೂ ಓದುಗರಿಗೂ ನಾನು ಆಭಾರಿ

"ಚಂದ್ರಿಕಾ", ೨೨ ಪಿಟೀಲ್ ಚೌಡಯ್ಯ ರಸ್ತೆ **ಕಾಕೋಳು ಸರೋಜಾರಾವ್**
೬ನೇ ದೇವಾಲಯರಸ್ತೆ, ಮಲ್ಲೇಶ್ವರ
ಬೆಂಗಳೂರು – ೫೬೦ ೦೦೩

# ದಾಸ ಸಾಹಿತ್ಯ ಸಮೀಕ್ಷೆ

ಸಾಹಿತ್ಯ ಸಮಾಜದ ಕನ್ನಡಿ ಎಂದು ಹೇಳುತ್ತಾರೆ ಅಂದರೆ ಸಾಹಿತ್ಯದ ಮೂಲಕ ಸಮಾಜದ ಸುಧಾರಣೆಯಾಗಬೇಕು ಎಂಬ ಕೂಗು ಇಂದು ಎಲ್ಲೆಡೆಗೂ ಕೇಳಿಬರುತ್ತಿದೆ ಸಮಾಜದ ಲೋಪದೋಷಗಳನ್ನು ಸಾಹಿತಿಯು ತನ್ನ ಲೇಖನಿಯಿಂದ ಚಿತ್ರಿಸುತ್ತಾನೆ ಈ ಚಿತ್ರಣವು, ನಾಟಕ, ಕಾದಂಬರಿ; ಸಣ್ಣ ಕಥೆ ಇಲ್ಲವೇ ಪದ್ಯ ರೂಪದಲ್ಲಿ ಪ್ರಕಟವಾಗುತ್ತದೆ ಆದುದರಿಂದ ಸಮಾಜದ ಪುನರ್‌ನಿರ್ಮಾಣಮಾಡಲು ಆದರ್ಶ ಸಮಾಜ ನಿರ್ಮಾಣದ ಗುರಿಗೆ ಸಾಹಿತಿಯ ಸಹಕಾರವೂ ಅತ್ಯಗತ್ಯ ಎಂದಾಯಿತು

ಹಲವಾರು ಸಂಸ್ಕೃತಿಗಳ ಬೀಡಾಗಿರುವ ಭಾರತವು ಆದರಲ್ಲೂ ಕರ್ನಾಟಕವಂತೂ ವಿವಿಧ ಭಕ್ತಿಪಂಥಗಳಿಗೆ ಗಣಿಯಂತಿದೆ ವಿವಿಧ ಧರ್ಮಗಳನ್ನು ಬೋಧಿಸುವ ಧರ್ಮೋಪದೇಶಕರು, ಮಹಾತ್ಮರೂ ಈ ದೇಶದಲ್ಲಿ ಜನನ ತಳೆದು, ಕಾಲಕಾಲಕ್ಕೆ ನಾಶವಾಗುತ್ತಿರುವ ನಮ್ಮ ಜ್ಞಾನ, ಭಕ್ತಿ, ವೈರಾಗ್ಯ, ಸಂಸ್ಕೃತಿ, ಪ್ರೀತಿ, ಸಹಕಾರ, ಕಾಯಕ ಮುಂತಾದ ಜೀವನ ಮೌಲ್ಯಗಳ ಬಗ್ಗೆ ಜನರಿಗೆ ಎಚ್ಚರವಿತ್ತಿದ್ದರೂ ಸಾಮಾನ್ಯ ಜನತೆಗೆ ತಿಳಿಯುವ ಭಾಷೆಯಲ್ಲಿ ವೇದೋಪನಿಷತ್ತುಗಳನ್ನೂ ಆದರ ತತ್ವಗಳನ್ನೂ ತಿಳಿಸುವಂತೆ ಬೋಧಿಸಲು ರೂಪುಗೊಂಡಿತು ಕನ್ನಡ ದಾಸಸಾಹಿತ್ಯ

ಧರ್ಮ, ತತ್ವಜ್ಞಾನ ಮುಂತಾದುವುಗಳ ಗಹನವಾದ ವಿವೇಚನೆಯಿಂದ ಧಾರ್ಮಿಕ ಸಾಹಿತ್ಯ ಹೇಗೆ ಉದಯಿಸಿತು ಎಂಬುದು ಮುಖ್ಯಾಂಶ

ಕನ್ನಡ ಸಾಹಿತ್ಯೇತಿಹಾಸದ ಪುಟಗಳನ್ನು ತಿರುವುತ್ತಾ ಹೋದರೆ ವಡ್ಡಾರಾಧನೆ ಹಾಗೂ ಕವಿರಾಜಮಾರ್ಗಗಳು ಉಪಲಬ್ದ ಪ್ರಾಚೀನ ಕೃತಿಗಳೆಂದು ಹೇಳಬಹುದು

ವಡ್ಡಾರಾಧನೆ ಜೈನ ತತ್ವವುಳ್ಳ ಹತ್ತೊಂಬತ್ತು ಕಥೆಗಳನ್ನು ಹೊಂದಿದ್ದರೆ ಕವಿ ರಾಜಮಾರ್ಗವು, ಕಾವ್ಯ ಲಕ್ಷಣ ಗ್ರಂಥವಾಗಿದೆ ಹತ್ತನೇ ಶತಮಾನದ ಕವಿ ಪಂಪನಿಂದ ಹನ್ನೆರಡನೆಯ ಶತಮಾನದವರೆಗೂ ಚಂಪೂ ಕಾವ್ಯ ಪ್ರಕಾರವೂ ಜೈನತತ್ವವನ್ನೊಳಗೊಂಡ ಶ್ರೇಷ್ಠ ಸಾಹಿತ್ಯವನ್ನು ಹೊತ್ತು ತಂದಿದೆ

ಹನ್ನೆರಡನೆಯ ಶತಮಾನದವರೆಗಿನ ಸಾಹಿತ್ಯ, ಅನುಭಾವ ಸಾಹಿತ್ಯವಲ್ಲ ಮಹಾಭಾರತ, ರಾಮಾಯಣಗಳ ಕಥಾವಸ್ತುವುಳ್ಳ ಚಂಪೂ ಕಾವ್ಯಗಳೂ ತೀರ್ಥಂಕರ ಚರಿತ್ರೆಯುಳ್ಳ ಜೈನ ಪುರಾಣಗಳೂ ಈ ಕಾಲದಲ್ಲಿ ಜನ್ಮತಾಳಿದೆ ಹನ್ನೆರಡನೆಯ ಶತಮಾನದ ನಂತರ ಅನುಬಾವ ಸಾಹಿತ್ಯ ಜನ್ಮ ತಳೆದು, ಭಾಷಾ ದೃಷ್ಟಿಯಿಂದ ಛಂದಸ್ಸಿನ ದೃಷ್ಟಿಯಿಂದಲೂ ಶಿವಶರಣರು ಕ್ರಾಂತಿಗೈದು ಅಂದಿನ ಸಮಾಜದ ಮೇಲು ಕೀಳು, ಉಚ್ಚ ನೀಚ ಎಂಬ ಭೇದ ಭಾವನೆಗಳಿಗೆ ಬೋಧನಾಮೃತವನ್ನೆರೆದು ವಚನ ಸಾಹಿತ್ಯವೂ ರೂಢಿಗತವಾಯಿತು

ಅನಂತರ ಭಕ್ತಿಭಾವ ಸಾಹಿತ್ಯದ ನಿರ್ಮಾಪಕರೆಂದರೆ ಹರಿದಾಸರು ಕನ್ನಡ ನಾಡಿನ ಭಕ್ತಿ ಪರಂಪರೆಯಲ್ಲಿ ಹರಿದಾಸರು ವೇದವೇದ್ಯನಾದ ಶ್ರೀ ಹರಿಯನ್ನು ಆರಾಧ್ಯದೈವವಾಗಿಟ್ಟುಕೊಂಡು ಶ್ರೀ ಹರಿಯ ಸ್ತುತಿಯೊಂದಿಗೆ ಸಮಾಜಕ್ಕೆ ಬೋಧನಾ ಪರವಾದ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದರು ದಿವ್ಯಮಧುರ ಭಕ್ತಿ ಸುಧೆಯಿಂದ ತುಂಬಿದ ದಾಸಸಾಹಿತ್ಯದಿಂದ ಶ್ರೀ ಹರಿದಾಸರು ಆತ್ಮೋದ್ಧಾರದ ಮಾರ್ಗವನ್ನು ಕಂಡುಕೊಂಡು ತಾವು ವೈರಾಗ್ಯ ಭಾಗ್ಯ ಸಂಪನ್ನರಾಗಿ ಜನತೆಗೆ ಜ್ಞಾನಮಾರ್ಗವನ್ನು ತಿಳಿಗನ್ನಡ ನುಡಿಯಿಂದ ಬೋಧಿಸಿದ್ದಾರೆ

ವಿಜಯನಗರ ದೊರೆಗಳ ಆಳ್ವಿಕೆಯ ಕಾಲವು ದಾಸಸಾಹಿತ್ಯದ ವಸಂತ ಕಾಲದಂತಾಗಿದ್ದಿತು ಹರಿದಾಸರು ಕೇವಲ ಮಧ್ವಮತದ ಪ್ರಚಾರಕರು ಎಂದು ಹೇಳುವುದುಂಟು ಆದರೆ ಕನ್ನಡ ಸಾಹಿತ್ಯವಾಹಿನಿ ಧರ್ಮತತ್ವಗಳ ವಿವಿಧ ರೂಪಗಳಲ್ಲಿ ಹರಿದು ಮುದ್ದಣನವರೆಗೂ ಹರಿದಿದ್ದಾಳೆಂದ ಮೇಲೆ ಈ ಹೇಳಿಕೆ ಸರಿಯಲ್ಲ

ಜಗತ್ತಿನ ಪ್ರತಿಯೊಂದು ಜನಾಂಗವೂ ಒಂದಲ್ಲೊಂದು ರೂಪದಿಂದ ಮೂರ್ತಿಪೂಜೆಯನ್ನು ಹೊಂದಿದೆ ಒಂದು ಕಡೆ ವಿಷ್ಣುಪರವಾಗಿದ್ದರೆ ಮತ್ತೊಂದೆಡೆ

ಶಿವಪರವಾಗಿದೆ ಪ್ರೇಮರಸದ ಪ್ರತಿರೂಪಗಳಾದ ವಾತ್ಸಲ್ಯ ಪ್ರೀತಿ, ಅಕ್ಕರತೆ, ಪ್ರಣಯ, ಗೌರವ, ಭಕ್ತಿ ಇವುಗಳಿಗೆ ಬದ್ಧನಾದ ಮಾನವನ ಗುಣದರ್ಮಗಳೂ ಕೂಡ ಒಂದಿಲ್ಲೊಂದು ರೀತಿಯಲ್ಲಿ ಹರಿಯುತ್ತದೆ

ಆಂಧ್ರ, ಕರ್ನಾಟಕ ಮತ್ತು ದಕ್ಷಿಣದೇಶಗಳಲ್ಲಿ ಶೈವಪಂಥ, ವೈಷ್ಣವ ಪಂಥಗಳೆರಡೂ ಜೊತೆಜೊತೆಯಾಗಿ ನಿಂತವು ರಾಜಾಶ್ರಯವೂ ಇವುಗಳಿಗೆ ಲಬಿಸಿದಾಗ, ಈ ಬಕ್ತಿ ಪಂಥಗಳು ಕರ್ನಾಟಕದಲ್ಲಿ ಬಹುಕಾಲ ಬಾಳಿ ತತ್ತ್ವ ವಿಚಾರದ ಕ್ರಾಂತಿಯ ಕಹಳೆಯನ್ನೇ ಊದಿವೆ

ಕ್ರಿ ಶ ೩ಳನೇ ಶತಮಾನದಿಂದ ಹದಿನಾಲ್ಕನೇ ಶತಮಾನದವರೆಗೂ ಶ್ರೀ ಶಂಕರ, ಶ್ರೀ ರಾಮಾನುಜರ ಅದ್ವೈತ ವಿಶಿಷ್ಟಾದ್ವೈತ ಮತ್ತು ವೀರಶೈವ ಮತಗಳೂ, ಮಧ್ವಾಚಾರ್ಯರ ದ್ವೈತ ಸಿದ್ಧಾಂತವೂ ಉಗಮಹೊಂದಿ ಶ್ರೀ ಮಧ್ವಾಚಾರ್ಯರು ಶಂಕರ ರಾಮಾನುಜರ ತತ್ತ್ವಗಳನ್ನು ಖಂಡಿಸಿ ಸ್ವತಂತ್ರ ಮತ್ತು ಅಸ್ವತಂತ್ರ ಎಂಬ ಎರಡೇ ತತ್ತ್ವವನ್ನು ಬೋಧನೆ ಮಾಡಿದರು

ಕರ್ನಾಟಕ ಹರಿದಾಸ ಪರಂಪರೆಗೆ ಮಧ್ವಾಚಾರ್ಯರೇ ಮೂಲಪುರುಷರು ತಮ್ಮ ಸಿದ್ಧಾಂತದಲ್ಲಿ ಪ್ರಮಾಣ ಮತ್ತು ಪ್ರಮೇಯಗಳ ನೈಜ ಸ್ವರೂಪವನ್ನು ಕೂಲಂಕುಷವಾಗಿ ನಿರೂಪಿಸಿದರು ಅನಂತರದ ಹರಿದಾಸರೆಲ್ಲಾ ತಮ್ಮ ಕೀರ್ತನೆಗಳಿಗೆ ಮದ್ವಮತವನ್ನು ಅಡಿಗಟ್ಟಾಗಿ ಮಾಡಿಕೊಂಡು ಜ್ಞಾನ ಭಕ್ತಿ ವೈರಾಗ್ಯ ಬೋಧಕಗಳಾದ ಕೀರ್ತನೆಗಳನ್ನು ರಚಿಸಿದರು ಹದಿಮೂರನೇ ಶತಮಾನದ ಶ್ರೀ ನರಹರಿತೀರ್ಥರು ದಾಸಸಾಹಿತ್ಯದ ಬೆಳವಣಿಗೆಗೆ ನಾಂದಿ ಹಾಡಿದವರು ಎಂದು ಖಚಿತವಾಗಿ ಹೇಳಬಹುದು ಶ್ರೀ ನರಹರಿತೀರ್ಥರು ಶ್ರೀಮಧ್ವಾಚಾರ್ಯರ ನಂತರ ಪೀಠಾರೋಹಣ ಮಾಡಿದ ಶ್ರೀ ಪದ್ಮನಾಭತೀರ್ಥರ ಅನಂತರದಲ್ಲಿ ಪೀಠಾರೋಹಣ ಮಾಡಿದ್ದು ಮದ್ವಸಿದ್ಧಾಂತ ಸೌರಭವನ್ನು ಬೀರುವ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ ಇದರ ನಂತರ ದಾಸಸಾಹಿತ್ಯದಲ್ಲಿ ಪ್ರಮುಖರಾದವರು ಶ್ರೀಪಾದರಾಯರು ಕ್ರಿ ಶ ೧೪೨೨ ಇವರ ಕಾಲ ಇವರ ಕಾಲದಲ್ಲಿ ದಾಸಸಾಹಿತ್ಯವು ಮೆರುಗನ್ನು ಪಡೆಯಿತು ಸುಳಾದಿ ಎಂಬ ಪರಿಭಾಷೆಯಿಂದ ಕರ್ನಾಟಕ ಗಾಯನಕ್ಕೆ ಹೊಸಬೆಳಕನ್ನಿತ್ತ ಕೀರ್ತಿ ಶ್ರೀಪಾದರಾಯರಿಗೆ ಸಲ್ಲುತ್ತದೆ

ಶ್ರೀಪಾದರಾಜರ ಆನಂತರ ದಾಸಸಾಹಿತ್ಯದ ಉಜ್ವಲ ಪರಂಪರೆಯನ್ನು ಬೆಳೆಯಿಸಿದವರೆಂದರೆ ಶ್ರೀ ವ್ಯಾಸರಾಜರು ಇವರ ಕಾಲ ೧೪೪೭ ರಿಂದ ೧೫೩೯ ಎಂದು ವಿದ್ವಾಂಸರ ಮತ ಮಠಾಧಿಪತಿಗಳಾಗಿ ಒಂದೆಡೆಗೆ ರಾಜಗುರುಗಳೆನಿಸಿದರೆ ಮತ್ತೊಂದೆಡೆ ಧರ್ಮೋಪದೇಶಕರೂ ದ್ವೈತ ವೇದಾಂತ ಪ್ರಪಂಚದಲ್ಲಿ ಮೇರು ಕೃತಿಗಳಾದ ವ್ಯಾಸತ್ರಯಗಳನ್ನು ರಚಿಸಿದವರೂ ಆಗಿದ್ದರು ಸಾಳುವ ನರಸಿಂಹನ ಆಳ್ವಿಕೆಯ ಕಾಲದಿಂದ ಅಚ್ಯುತರಾಯನ ಆಳ್ವಿಕೆಯವರೆಗೂ ಸುಮಾರು ಅರವತ್ತು ವರ್ಷಗಳ ಕಾಲ ಸಕಲ ರಾಜ ಮಹಾರಾಜರಿಂದ ಸನ್ಮಾನಿಸಲ್ಪಟ್ಟರು

ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ದೊರೆಯೆನಿಸಿದ ಕೃಷ್ಣದೇವರಾಯನು ಶ್ರೀ ವ್ಯಾಸರಾಜರನ್ನು ಆರಾಧ್ಯದೇವತೆಯಂತೆ ಸನ್ಮಾನಿಸಿದ್ದ ಅಂಕಿತ ಪ್ರಧಾನ ಪದ್ಧತಿ ಇವರಿಂದಲೇ ಆರಂಭವಾಯಿತು ವ್ಯಾಸರಾಜರೂ ತಮ್ಮ ನೇತೃತ್ವದಲ್ಲಿ 'ದಾಸಕೂಟ'ವನ್ನು ಏರ್ಪಡಿಸಿದರು ನಂತರ ಬಂದ ಪುರಂದರದಾಸರು ಈ ದಾಸಕೂಟಕ್ಕೆ ಮುಕುಟಮಣಿಯೆಂದೆನಿಸಿದ್ದಾರೆ ಶ್ರೀ ವಾದಿರಾಜರೂ ದಾಸ ಸಾಹಿತ್ಯಕ್ಕೆ ಉಜ್ವಲಸ್ವರೂಪವನ್ನಿತ್ತಿದ್ದಾರೆ ೧೪೮೪ ರಿಂದ ೧೫೬೪ ರಲ್ಲಿದ್ದವರೆಂದು ಹೇಳಲಾದ ಪುರಂದರದಾಸರ ' ಕಾಲವಂತೂ ದಾಸ ಸಾಹಿತ್ಯದ ಸುವರ್ಣ ಕಾಲವೆಂದು ಹೇಳಬಹುದು ಅಂದಿನ ಸಮಾಜದಲ್ಲಿ ನಡೆಯುತ್ತಿದ್ದ ಧಾರ್ಮಿಕ ಕ್ಷೋಭೆ, ಸಾಮಾಜಿಕ ಅಶಾಂತಿ, ಪರಸ್ಪರ ವೈಷಮ್ಯ ಮುಂತಾದುದನ್ನೆಲ್ಲಾ ಗಮನಿಸಿ ದುಷ್ಟಶಕ್ತಿಗಳಿಂದಾಗಿ ಹಾಳಾಗಿ ಹೋಗುತ್ತಿರುವ ಅಂದಿನ ಸಮಾಜದ ಮಾನ್ಯತೆಯನ್ನು ಚಿತ್ರಿಸಿದ್ದಾರೆ, ಎಚ್ಚರಿಸಿದ್ದಾರೆ, ಜ್ಞಾನಮಾರ್ಗ ಧರ್ಮಮಾರ್ಗಗಳನ್ನು ಬೆಳಗಿದ್ದಾರೆ

ಪುರಂದರದಾಸರ ಜಾಡಿನಲ್ಲಿಯೇ ಸಾಗಿದ ಮತ್ತೊಬ್ಬ ದಾಸರೆಂದರೆ, ಕನಕದಾಸರು ಕ್ರಿ ಶ ಹದಿನಾರನೆಯ ಶತಮಾನದಲ್ಲಿ ಇವರು ಕಾಗಿನೆಲೆಯಾದ ಕೇಶವ ಸ್ವಾಮಿಯನ್ನು ಆರಾಧ್ಯದೈವವನ್ನಾಗಿ ಮಾಡಿಕೊಂಡಿದ್ದರು ಕೀಳು ಕುಲದಲ್ಲಿ ಜನಿಸಿದ್ದರೂ ಪೂರ್ವಜನ್ಮದ ಸಂಸ್ಕಾರದಿಂದಾಗಿ ದಾಸವರೇಣ್ಯರಾದರು ಕನಕದಾಸರ ಮಹಿಮೆಯ ಸಂಕೇತವಾಗಿ ಉಡುಪಿಯ ಕನಕನಕಿಂಡಿ ಪ್ರಸಿದ್ಧವಾಗಿದೆ ಬೋಧನಾಪರ ಕೀರ್ತನೆಗಳನ್ನೇ ಅಲ್ಲದೆ ದಾಸರು "ರಾಮಧಾನ್ಯ ಚರಿತ್ರೆ", "ಮೋಹನ ತರಂಗಿಣಿ", "ನಳ ಚರಿತ್ರೆ"ಗಳೆಂಬ ಕಾವ್ಯಕೃತಿಗಳನ್ನು ರಚಿಸಿದ್ದಾರೆ

ದಾಸಸಾಹಿತ್ಯ ದ್ವಿತೀಯ ಘಟ್ಟದಲ್ಲಿ ಮಹೀಪತಿರಾಯರು, ವಿಜಯ ದಾಸರು ಪ್ರಮುಖರು ದಾಸ ಪರಂಪರೆಯನ್ನು ಪುನರುಜ್ಜೀವನಗೊಳಿಸಿದ ಮಹಾತ್ಮರು ವಿಜಯದಾಸರು ಅನಂತರ ಗೋಪಾಲದಾಸರು ಗೋಪಾಲ ವಿಠಲ ಎಂಬುದು ಇವರ ಅಂಕಿತ ಇವರು ರಚಿಸಿದ ಕೀರ್ತನೆಗಳು ಪ್ರಖ್ಯಾತವಾದುವು

ಗೋಪಾಲದಾಸರ ಅನಂತರ ಅವರ ಶಿಷ್ಯತ್ವವನ್ನು ವಹಿಸಿದವರು ಜಗನ್ನಾಥ ದಾಸರು ದಾಸಸಾಹಿತ್ಯದಲ್ಲಿ ಗಣ್ಯರು ಇವರ ಕಾಲ ಕ್ರಿ ಶ ೧೭೨೮ ರಿಂದ ೧೮೦೯ ಜಗನ್ನಾಥದಾಸರು ದ್ವೈತಸಿದ್ಧಾಂತದ ಕೈಪಿಡಿಯಂತಿರುವ ಹರಿಕಥಾಮೃತಸಾರ ಎಂಬ ಕಾವ್ಯಕೃತಿಯನ್ನು ರಚಿಸಿದ್ದಾರೆ ಅಲ್ಲದೆ ಲೋಕನೀತಿಯುಕ್ತ ಕೀರ್ತನೆಗಳನ್ನು ರಚಿಸಿದ್ದಾರೆ ಜಗನ್ನಾಥದಾಸರ ಮೊದಲು ಪ್ರಸನ್ನ ವೆಂಕಟದಾಸರು ಅವರ ನಂತರ ಹೆಳವನಕಟ್ಟೆ ಗಿರಿಯಮ್ಮನೂ ಸಹ ವಿಶೇಷ ಪ್ರಸಿದ್ಧಿ ಪಡೆದಿದ್ದಾರೆ

ನರಹರಿ ತೀರ್ಥರಿಂದ ಉದಯಿಸಿದ ದಾಸಸಾಹಿತ್ಯಬಾನು ಹೆಳವನಕಟ್ಟೆ ಗಿರಿಯಮ್ಮನವರೆಗೂ ಅವ್ಯಾಹತವಾಗಿ ದೇದೀಪ್ಯಮಾನವಾಗಿ ಬೆಳಗಿದ್ದಾನೆ ಹದಿನೆಂಟನೇ ಶತಮಾನದ ಹೆಳವನಕಟ್ಟೆ ಗಿರಿಯಮ್ಮನನ್ನು ಬಾಗವತ ಸಂಪ್ರದಾಯಕ್ಕೆ ಜೋಡಿಸಿ ಹರಿದಾಸರ ಹೆಸರುಗಳಲ್ಲಿ ಸೇರಿಸಿರುವುದು ವಿಹಿತ

ಗೋಪಾಲದಾಸರಿಂದ ಅನುಗ್ರಹಿತಳಾದವಳೂ ದಾಸಸಾಹಿತ್ಯ ಪಂಕ್ತಿಯಲ್ಲಿ ಮುಂದುವರಿದವಳೂ ಆದ ಹೆಳವನ ಕಟ್ಟೆ ಗಿರಿಯಮ್ಮ ಕನ್ನಡದ ಕವಯಿತ್ರಿಯರಲ್ಲಿ ಪ್ರಮುಖಳಾದವಳು ಆತ್ಮೋದ್ಧಾರದೊಂದಿಗೆ ಜನಸೇವೆಗಾಗಿ ಬದ್ಧಕಂಕಣಳಾದ ಗಿರಿಯಮ್ಮ ತನ್ನ ಭಕ್ತಿಯ ಪವಾಡಗಳಿಂದ ಕ್ರಾಂತಿಯನ್ನೆಬ್ಬಿಸಿದ್ದಾಳೆ ಇವಳ ಕಾಲ ೧೭೫೦ ಹೆಳವನಕಟ್ಟೆ ರಂಗ ಎಂಬ ಅಂಕಿತದಲ್ಲಿ ಇವಳ ಕೃತಿಗಳು ಕನ್ನಡಿಗರ ಮನವನ್ನು ಸೂರೆಗೊಂಡಿವೆ ಇವಳ ವೈರಾಗ್ಯ, ಭಕ್ತಿಗಳ ಸ್ವರೂಪವೇನು ? ಸಮಾಜದ ಲೋಪದೋಷಗಳನ್ನು ಗಿರಿಯಮ್ಮ ಹೇಗೆ ಖಂಡಿಸಿದಳು ? ಕನ್ನಡ ಸಾಹಿತ್ಯ ಸಂಸ್ಕೃತಿಗೆ ಇವಳು ನೀಡಿದ ಕೊಡುಗೆಯೇನು ? ಎಂಬುದಕ್ಕೆ ಸಾಕಷ್ಟು ವಿಷಯ ಸಂಗ್ರಹಣವಾದರೂ ಪೂರ್ತಿ ವಿವರಣೆ ದೊರೆತಿಲ್ಲ

ಗಿರಿಯಮ್ಮನಿಂದ ರಚಿತವಾದ ಸಾಹಿತ್ಯ ವಿಪುಲವಾದುದು ಬಿಡಿಬಿಡಿಯಾಗಿ ಅನೇಕ ಕೀರ್ತನೆಗಳನ್ನು ರಚಿಸಿದ ಗಿರಿಯಮ್ಮ ಸುಮಾರು ಏಳು ವಿಶೇಷ ಕೃತಿಗಳನ್ನು ರಚಿಸಿದ್ದಾಳೆ ಅವು ಅವಳಿಗೆ ಕನ್ನಡ ಸಾಹಿತ್ಯದಲ್ಲೊಂದು ವಿಶಿಷ್ಟಸ್ಥಾನವನ್ನು

ಕಲ್ಪಿಸಿಕೊಟ್ಟಿವೆ ಅವಳ ಕೀರ್ತನೆಗಳ ಬಾಪವೆಲ್ಲಾ ಭಗವಂತನ ಬಗೆಗೆ ಪುತ್ರವಾತ್ಸಲ್ಯದಿಂದ ಕೂಡಿದುದು ಗಿರಿಯಮ್ಮ ಸ್ವಬಾವತಃ ಹೆಂಗರುಳಾದ್ದರಿಂದ ಅನೇಕ ಕರುಣಾಜನಕ ಸನ್ನಿವೇಶಗಳಲ್ಲಿ ಅವಳ ಕಾವ್ಯಸಿದ್ಧಿ ಸಾಫಲ್ಯವನ್ನು ಪಡೆದಿದೆ

ಮಲೆಬೆನ್ನೂರಿಗೆ ಸಮೀಪದಲ್ಲಿಯೇ ಕುಮಾರನಹಳ್ಳಿ ಎಂಬುದೊಂದು ಚಿಕ್ಕ ಗ್ರಾಮವಿದೆ ಅಲ್ಲಿಯೇ ಸಮೀಪದಲ್ಲಿದ್ದ ದಿಬ್ಬವೊಂದರಲ್ಲಿ ಹೆಳವನೊಬ್ಬ ವಾಸವಾಗಿದ್ದು ಅವನು ನಿರ್ಮಾಣ ಮಾಡಿದ ಕೆರೆಯ ಬದಿಗಿದ್ದ ಹುತ್ತದಲ್ಲಿ ಅವನಿಗೆ ರಂಗನಾಥನ ಮೂರ್ತಿಯೊಂದು ದೊರಕಿತು ಹೀಗಾಗಿ ಅಲ್ಲಿ ಕ್ಷೇತ್ರವೊಂದು ನಿರ್ಮಾಣವಾಗಿ, ಅವನ ಸ್ಮರಣಾರ್ಥವಾಗಿ ಆ ಸ್ಥಳಕ್ಕೆ ಹೆಳವನಕಟ್ಟೆ ಎಂದು ಜನರು ಕರೆಯತೊಡಗಿದರು

ಗಿರಿಯಮ್ಮ ತನ್ನ ಪತಿಯ ಮನೆಗೆಂದು ಮಲೆಬೆನ್ನೂರಿಗೆ ಬಂದಾಗ ಹೆಳವನಕಟ್ಟೆ ಕ್ಷೇತ್ರ ಅವಳನ್ನಾಕರ್ಷಿಸಿತು ರಂಗನಾಥಸ್ವಾಮಿ ಅವಳ ಆರಾಧ್ಯ ದೇವತೆಯಾದನು

ಒಂದು ಬಾರಿ ಉಡುಪಿ ಯಾತ್ರೆಗೆ ಹೋಗುವಾಗ ಗೋಪಾಲದಾಸರು ಮಲೆಬೆನ್ನೂರಿಗೆ ಬಂದು ತಂಗಿದರು ಆಗ ಅವರು ಗಿರಿಯಮ್ಮನಿಗೆ ಬಾಲ ಗೋಪಾಲನ ಸುಂದರವಾದ ಮೂರ್ತಿಯೊಂದನ್ನು ಪ್ರಸಾದರೂಪವಾಗಿತ್ತು ಮುದ್ರಿಕೆಯನ್ನು ನೀಡಿದರು ಮುಂದೆ 'ಹೆಳವನಕಟ್ಟೆ ರಂಗ' ಎಂಬ ಮುದ್ರಿಕೆಯಲ್ಲಿ ಅವಳು ಕೀರ್ತನೆಗಳನ್ನು ರಚಿಸಿದಳು ಅವಳಿಗೆ ಕಾವ್ಯರಚನಾ ಸಾಮರ್ಥ್ಯ ಹೇಗೆ ಬಂತೆಂಬುದು ಮುಖ್ಯವಲ್ಲ ಆದರೆ ಅವಳ ಕಾವ್ಯಗಳ ವಿಶ್ಲೇಷಣೆ ಮತ್ತು ಮೌಲ್ಯ ನಿರ್ಧಾರವೇ ನಮಗೆ ಪ್ರಸ್ತುತ

ಗಿರಿಯಮ್ಮ ಒಂದು ಸಾಮಾನ್ಯ ಕುಟುಂಬದ ಗೃಹಿಣಿಯಾದರೂ ಅಂದಿನ ಸಾಮಾಜಿಕ ಪರಿಸರದಲ್ಲಿ ಸಾಮಾನ್ಯ ಸ್ತ್ರೀಯೊಬ್ಬಳು ಅಭಿವ್ಯಕ್ತಿಯ ಈ ಸ್ವಾತಂತ್ರ್ಯವನ್ನು ವಹಿಸಿ ಸಾಮಾನ್ಯ ಜನತೆಗೆಂದು ಬರೆದ ಕವಯಿತ್ರಿ ಅವಳಾದರೂ ಮೌಲ್ಯ ನಿರ್ಧಾರವೇ ನಮಗೆ ಪ್ರಸ್ತುತ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವಳ ಸ್ಥಾನ ಮಹತ್ವದ್ದಾಗಿದೆ ಗಿರಿಯಮ್ಮನ ಬಗ್ಗೆ ಅನೇಕಾನೇಕ ದಂತ ಕಥೆಗಳು ಹುಟ್ಟಿಕೊಂಡಿವೆಯಾದರೂ ಶಾಸ್ತ್ರೀಯವಾದ ರೀತಿಯಲ್ಲಿ ಅವಳ ಜೀವನ ಮಹತ್ವದ ಘಟನೆಗಳ ಬಗ್ಗೆ ಸಂಶೋಧನೆ ನಡೆಸುವುದು ಅತ್ಯವಶ್ಯಕವಾಗಿದೆ ಎಂದರೆ ಅತಿಶಯವೇನಲ್ಲ

# ಹರಿದಾಸ ಪಂಥದಲ್ಲಿ ಪ್ರಮುಖ ದಾಸವರೇಣ್ಯರು

| ಅ ನಂ | ದಾಸರ ಹೆಸರು | ಕಾಲ ಕ್ರಿ ಶ | ಅಂಕಿತ | ಕೃತಿಗಳು |
|---|---|---|---|---|
| ೧) | ನರಹರಿತೀರ್ಥರು | ೧೨೭೫ | ರಘುಕುಲತಿಲಕ ಅಥವಾ ಶ್ರೀ ರಘುಪತಿ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೨) | ಶ್ರೀಪಾದರಾಜರು | ೧೪೨೨–೧೪೮೦ | ರಂಗವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೩) | ವ್ಯಾಸರಾಜರು | ೧೪೪೭–೧೫೩೯ | ಶ್ರೀಕೃಷ್ಣ ಅಥವಾ ಕೃಷ್ಣ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೪) | ವಾದಿರಾಜರು | ೧೪೮೦–೧೬೦೦ | ಹಯವದನ | ಕೀರ್ತನೆ, ವೈಕುಂಠ ವರ್ಣನೆ, ಸ್ವಪ್ನ–ಗದ್ಯ, ಲಕ್ಷ್ಮೀಶೋಭಾನೆ, ಗುಂಡಕ್ರಿಯಾ ಇತ್ಯಾದಿ ಕಾವ್ಯಕೃತಿಗಳು |
| ೫) | ಪುರಂದರದಾಸರು | ೧೪೮೪–೧೫೬೪ | ಪುರಂದರವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೬) | ಕನಕದಾಸರು | ೧೫೦೯–೧೬೦೭ ? | ಕಾಗಿನೆಲೆಯಾದಿ ಕೇಶವ ಅಥವಾ ಬಾಡದಾದಿಕೇಶವ | ಕೀರ್ತನೆ ಹಾಗೂ ಮೋಹನತರಂಗಿಣಿ, ರಾಮಧಾನ್ಯ ಚರಿತೆ, ನಳಚರಿತ್ರೆ, ಹರಿಭಕ್ತಿಸಾರ ಎಂಬ ಕಾವ್ಯಕೃತಿಗಳು |
| ೭) | ವಿಜಯದಾಸರು | ೧೬೩೭–೧೭೩೫ | ವಿಜಯವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೮) | ಪ್ರಸನ್ನವೆಂಕಟದಾಸರು | ೧೬೮೦–೧೭೫೨ | ಶ್ರೀನಿವಾಸ ಅಥವಾ ಪ್ರಸನ್ನವೆಂಕಟ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೯) | ಗೋಪಾಲದಾಸರು | ೧೭೨೧–೧೭೬೨ | ಗೋಪಾಲವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು |
| ೧೦) | ಜಗನ್ನಾಥದಾಸರು | ೧೭೨೮–೧೮೦೯ | ಜಗನ್ನಾಥವಿಠಲ | ಕೀರ್ತನೆ, ಹಾಗೂ ಹರಿಕಥಾಮೃತಸಾರ (ಕಾವ್ಯ), ಸುಳಾದಿ, ಉಗಾಭೋಗಗಳು |
| ೧೧) | ಹೆಳವನಕಟ್ಟೆ ಗಿರಿಯಮ್ಮ | ೧೭೫೦ | ಹೆಳವನಕಟ್ಟೆಯ ರಂಗ | ಕೀರ್ತನೆ, ಚಂದ್ರಹಾಸ ಕಥೆ, ಸೀತಾಕಲ್ಯಾಣ, ಬ್ರಹ್ಮಕೊರವಂಜಿ |

# ಹೆಳವನಕಟ್ಟೆ ಗಿರಿಯಮ್ಮ

ಧಾರವಾಡ ಜಿಲ್ಲೆಯ ರಾಣಿಬೆನ್ನೂರಿನಲ್ಲಿ ಅರವತ್ತೊಕ್ಕಲು ಮನೆತನಕ್ಕೆ ಸೇರಿದ ಬಿಷ್ಟಪ್ಪ ಜೋಯಿಸರೆಂಬುವರು ಜೀವಿಸಿದ್ದರು ಇವರು ಮೊದಲಿನಿಂದಲೂ ಸಾತ್ವಿಕರೂ, ವೇದಾಧ್ಯಯನ ಸಂಪನ್ನರೂ, ಸದ್ಗುಣಭರಿತರೂ ಆಗಿದ್ದು ನಿತ್ಯಾನುಷ್ಠಾನಪರರಾಗಿದ್ದರು ಅವರ ಪತ್ನಿ ತುಂಗಮ್ಮ ಪತಿಯ ನಿತ್ಯಾನುಷ್ಠಾನಕ್ಕೆ ನೆರಳಿನಂತೆ ಸಹಕರಿಸುತ್ತಾ ಸಾಧ್ವಿಯಾಗಿದ್ದರು ಗಂಡ ಹೆಂಡತಿಯ ಅನ್ಯೋನ್ಯತೆ, ದಾಂಪತ್ಯದ ಬೆಸುಗೆ ವರ್ಣಿಸಲಸದಳವಾಗಿದ್ದರೂ ಜೀವನದಲ್ಲಿ ಬಹಳ ಕಾಲ ಮಕ್ಕಳಿಲ್ಲದ ಕೊರಗು ಅವರದಾಗಿತ್ತು ಮನೆಯಲ್ಲಿ ಮುದ್ದು ಕಂದನ ಕಿಲಕಿಲ ನಗೆ ಕೇಳದೆ ಅವರಿಗೆ ಆಗಾಗ ಜೀವನದಲ್ಲಿ ನೀರಸ ಅನುಭವವಾಗುತ್ತಿತ್ತು

ಪ್ರತಿದಿನವೂ ಪೂಜೆ ಮಾಡಿದನಂತರ ಬಿಷ್ಟಪ್ಪನವರು ದೇವರ ಮುಂದೆ ಕೈಜೋಡಿಸಿ ಬೇಡುತ್ತಿದ್ದುದೊಂದೇ

"ಸ್ವಾಮಿ, ನಿನ್ನನ್ನು ಪೂಜಿಸುವ ಈ ಕೈಗಳಲ್ಲಿ ಪುಟ್ಟ ಕಂದನೊಂದನ್ನು ಎತ್ತಿ ಆಡಿಸುವ ಸೌಭಾಗ್ಯ ನನಗೆ ಕರುಣಿಸು ತಂದೇ ಹತ್ತಾರು ಮಕ್ಕಳು ಬೇಡ, ಒಂದೇ ಒಂದು ಕೂಸನ್ನು ಕರುಣಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡು ತಂದೆ"

ಗಂಡಸರಾಗಿದ್ದ ಬಿಷ್ಟಪ್ಪನವರಿಗೆ ಈ ಕೊರಗನ್ನು ಮರೆಯಲು ಅನೇಕ ದಾರಿಗಳಿದ್ದವು ಅವರು ತಮ್ಮ ಸಮಯವನ್ನು ಮನೆಯ ಹೊರಗೆ ಕಳೆಯುವುದರಲ್ಲೋ, ಇಲ್ಲವೇ ಅವರಿವರೊಡನೆ ಮಾತನಾಡುವುದರಲ್ಲೋ ಕಳೆಯುತ್ತಿದ್ದರು ಇಲ್ಲವೇ ಮನೆಯಲ್ಲೇ ಕುಳಿತು, ರಾಮಾಯಣವನ್ನೋ, ಮಹಾಭಾರತವನ್ನೋ ಅಥವಾ ಭಾಗವತವನ್ನೋ ಕೈಗೆ ತೆಗೆದುಕೊಂಡು ಓದುತ್ತಾ ಕುಳಿತುಬಿಡುತ್ತಿದ್ದರು ಇಂತಹ

ಸಮಯಗಳಲ್ಲಿ ಮನಸ್ಸಿನ ಬೇಗುದಿಯನ್ನು ತಾತ್ಕಾಲಿಕವಾಗಿ ಮರೆಯಲು ಸಾದ್ಯವಾಗುತ್ತಿತ್ತು. ಆದರೆ ಮನೆಯಲ್ಲಿ ಹೆಚ್ಚು ಕೆಲಸವಿಲ್ಲದ ತುಂಗಮ್ಮನಿಗೆ ಮಕ್ಕಳಿಲ್ಲದ ಚಿಂತೆಯಿಂದ, ಜೀವನವೇ ನೀರಸವಾಗಿತ್ತು. ಸದಾಕಾಲವೂ ಮಂಕಾಗಿ ಕುಳಿತು ತನ್ನ ಕೈಗಳು ತೊಟ್ಟಿಲು ತೂಗುವಂತಾಗಬಾರದೇ ಎಂದು ಚಿಂತಿಸುತ್ತಿದ್ದಳು.

ಹೆಂಡತಿಯ ಗಾಢವಾದ ಚಿಂತೆಯನ್ನು ನೋಡಿ ಬಿಷ್ಟಪ್ಪನವರೇ ಅವಳಿಗೆ ಆಗಾಗ್ಗೆ ಸಮಾಧಾನ ಹೇಳುತ್ತಿದ್ದುದುಂಟು.

"ನೋಡು ತುಂಗ ನೀನೇನೂ ಅರಿಯದವಳಲ್ಲ. ಇವೆಲ್ಲಾ ಕೊರಗಿದರೆ, ಹಂಬಲಿಸಿದರೆ ದೊರಕುವ ಫಲಗಳಲ್ಲ. ಎಲ್ಲವೂ ಅವರವರ ಪ್ರಾಪ್ತಿ. ಋಣಾನುಬಂಧ. ಇದಕ್ಕಾಗಿ ದೇಹವನ್ನೇ ದಂಡಿಸಿದರೇನು ಪ್ರಯೋಜನ."

ತುಂಗ ಉತ್ತರಿಸುತ್ತಿದ್ದಳು.

"ನೀವು ಗಂಡಸರು ಮನೆಯ ಹೊರಗೆ ಸಮಯವನ್ನು ಕಳೆಯುತ್ತೀರಿ. ಆದರೆ ಮನೆಯಲ್ಲಿ ಸದಾಕಾಲವೂ ಏಕಾಂಗಿಯಾಗಿರುವ ನಾನು ಕಾಲ ಹೇಗೆ ದೂಡಲಿ ? ಜೀವನಪರ್ಯಂತ ಇದೇ ರೀತಿ ಇರಲು ಸಾಧ್ಯವೇ ?"

"ನಿಜ–ಆದರೇನು ಮಾಡಲು ಸಾಧ್ಯ ಹೇಳು. ಪರಮಾತ್ಮನ ಇಚ್ಛೆಯಿದ್ದಂತೆ ನಡೆಯಲಿ ಎಂದು ಪ್ರಾರ್ಥಿಸುವುದಷ್ಟೇ ನಮಗೆ ಉಳಿದಿರುವುದು."

"ನನ್ನದು ಹೆಣ್ಣು ಜೀವ. ತಾಯ್ತನದ ಸವಿಯನ್ನು ಅನುಭವಿಸದೆಯೇ ಜೀವನವನ್ನು ಸವೆಸಿಬಿಡಬೇಕೇ ?"

ಅವರಿಬ್ಬರ ನಡುವೆ ಮೌನ ಆವರಿಸುತ್ತಿತ್ತು.

ಒಂದು ದಿನ ಬಿಷ್ಟಪ್ಪನವರು ಆದೇ ತಾನೇ ದೇವರ ಪೂಜೆ ಮುಗಿಸಿ ಮೇಲೆದ್ದಾಗ, ದೇವರಪಟದಿಂದ ಆದೇ ತಾನೇ ಪೂಜೆ ಮಾಡಿದ ಹೂವು ಅವರೆದುರಿಗೆ ಉದುರಿಬಿತ್ತು. ಬಿಷ್ಟಪ್ಪನವರು ದೇವರಿಗೆ ಕೈ ಮುಗಿದು ಬಾಗಿ ಆ ಹೂವನ್ನೆತ್ತಿಕೊಂಡು, ಅಡಿಗೆಯಲ್ಲಿ ತೊಡಗಿದ್ದ ತುಂಗಮ್ಮನ ಬಳಿಗೆ ಬಂದು ನಿಂತು ನುಡಿದರು.

"ತುಂಗ ಭಗವಂತ ನಮ್ಮ ಪ್ರಾರ್ಥನೆಯನ್ನು ಆಲೈಸಿರಬೇಕು ಶ್ರೀನಿವಾಸರ ಪಾದದಿಂದ ಈ ಹೂವು ಉದುರಿತು ತಗೋ ಪ್ರಸಾದ"

ತುಂಗಮ್ಮ ಭಕ್ತಿಯಿಂದ ಆ ಹೂವನ್ನು ಕಣ್ಣಿಗೊತ್ತಿಕೊಂಡು ಮುಡಿಗೇರಿಸಿದಳು

"ಈ ದುಃಖದಿಂದ ಭಗವಂತನೇ ನಮ್ಮನ್ನು ಕಾಪಾಡಬೇಕು" ಎಂದು ಬಿಷ್ಟಪ್ಪನವರು ಮತ್ತೆ ನುಡಿದಾಗ, ತುಂಗಮ್ಮ ಕಣ್ಣಿಗೆ ಸೆರಗಿನ ತುದಿಯನ್ನೊತ್ತಿಕೊಂಡು ಮನದಲ್ಲೇ ದೇವರನ್ನು ಧ್ಯಾನಿಸಿದಳು

"ಭಗವಂತ, ನಿನ್ನ ಇಚ್ಛೆಗೆ ಬಂದರೆ ಇದೆಲ್ಲಾ ಎಷ್ಟು ಹೊತ್ತು ? ಆದರೆ ನಮ್ಮಲ್ಲಿ ಅಷ್ಟು ಪುಣ್ಯವಿದೆಯೇ ? ಒಟ್ಟಿನಲ್ಲಿ ನೀನೇ ಕಾಪಾಡು ತಂದೆ"

"ಭಗವಂತ ತನಗೆ ಸಂತಾನ ಭಾಗ್ಯ ಕರುಣಿಸಿಯಾನೆಂಬ ಸಮಾಧಾನದಿಂದ ತುಂಗಮ್ಮ ಅಂದಿನ ಅಡಿಗೆ ಮುಂದುವರಿಸಿದಳು

ಬಿಷ್ಟಪ್ಪ ಜೋಯಿಸರ ಮನೆಗೆ ಆಗಾಗ್ಗೆ ಬರುತ್ತಿದ್ದ ದಾಸರು, ತಾವು ಬಂದಾಗ ಒಂದೆರಡು ದೇವರನಾಮಗಳನ್ನು ಹೇಳಿ ಅವರಿಂದ ದಕ್ಷಿಣೆ ತಾಂಬೂಲ ಪಡೆದು ಹೋಗುತ್ತಿದ್ದುದುಂಟು ಈ ಬಾರಿ ದಾಸರು ನಿಯಮಿತ ವೇಳೆಗೆ ಮುಂಚೆಯೇ ಬಿಷ್ಟಪ್ಪನವರ ಮನೆಗೆ ಬಂದಿದ್ದು ಒಂದು ವಿಶೇಷವೆನಿಸಿತ್ತವರಿಗೆ

ದಾಸರನ್ನು ಆದರಿಸಿ, ಕುಳ್ಳಿರಿಸಿ ಅವರಿಗೆ ಹಾಲುಹಣ್ಣುಗಳನ್ನು ತರಲು ಹೆಂಡತಿಗೆ ಹೇಳಿದರು ಬಿಷ್ಟಪ್ಪನವರು

ದಾಸರು ಬಿಷ್ಟಪ್ಪನವರು ನೀಡಿದ ಆತಿಥ್ಯವನ್ನು ಸ್ವೀಕರಿಸಿದನಂತರ ಎದುರಿಗೇ ತುಸು ದೂರದಲ್ಲಿ ಕುಳಿತುಕೊಂಡ ತುಂಗಮ್ಮನನ್ನು ದಿಟ್ಟಿಸಿ ನಿಟ್ಟುಸಿರು ಬಿಟ್ಟು ನುಡಿದರು

"ಬಿಷ್ಟಪ್ಪಾ, ಅನೇಕ ಬಾರಿ ನಾವು ನಮ್ಮ ಕರ್ಮ ಕಳೆಯುವ ವೇಳೆಗೆ ಮಂಕರಾಗಿ ಬಿಡುತ್ತೇವೆ ಇದೂ ದೇವರ ಲೀಲೆಯೇ ಇರಬೇಕು ಸಹನೆಯ ಪರಮಾವಧಿ ದಾಟಿದಾಗ ಮಾನವನಿಗೆ ಎಲ್ಲವೂ ನೀರಸವೆನ್ನಿಸುವುದು ಏನೇ ಆಗಲಿ, ಈ ಬಾರಿ ನಾನು ತಿರುಪತಿಯ ಬ್ರಹ್ಮೋತ್ಸವಕ್ಕೆ ಹೋಗುವಾಗ ನೀನೂ ನಿನ್ನ ಹೆಂಡತಿಯ ಜತೆ ಬರಬಾರದೇಕೆ ? ಕರ್ತವ್ಯಲೋಪರಾಗದೆ ನಮ್ಮ ಪ್ರಯತ್ನ ನಾವು ಮಾಡಿದರಲ್ಲವೇ ಅನಂತರ ಭಗವಂತನ ಅನುಗ್ರಹ"

ದಾಸರ ಮಾತಿನಂತೆ ಬಿಷ್ಟಪ್ಪನವರೂ ಸಂತಸದಿಂದ ತಮ್ಮ ಹೆಂಡತಿಯೊಡ ಗೂಡಿ ದಾಸರೊಡನೆ ತಿರುಪತಿಯ ತಿಮ್ಮಪ್ಪನ ಸೇವೆಗಾಗಿ ಹೊರಟು ನಿಂತರು

ಶ್ರೀ ವೆಂಕಟೇಶ್ವರನ ಸೇವೆಯನ್ನು ಅನನ್ಯ ಬಕ್ತಿಯಿಂದ ಸಲ್ಲಿಸಿದ ಬಿಷ್ಟಪ್ಪ ದಂಪತಿಗಳಿಗೆ ಈ ಬಾರಿ ದೇವರು ಫಲವನ್ನು ನೀಡಿದ

ತುಂಗಮ್ಮನಲ್ಲಿ ಗರ್ಭಚಿಹ್ನೆಗಳು ಕಾಣಿಸಿದವು ದೇವರು ನಮ್ಮನ್ನು ಕಣ್ಣು ತೆರೆದು ನೋಡಿದನೆಂದು ದಂಪತಿಗಳು ಹಿಗ್ಗಿದರು

ಹುಟ್ಟುವ ಮಗುವಿನ ಮೇಲೆ ಸತ್ಪರಿಣಾಮವಾಗಲೆಂದು ಬಿಷ್ಟಪ್ಪನವರು ಹೆಂಡತಿಯನ್ನು ಮುಂದೆ ಕೂಡಿಸಿಕೊಂಡು ಪ್ರತಿದಿನವೂ ವಿರಾಮ ವೇಳೆಯಲ್ಲಿ ಅವಳಿಗೆ ಪುರಾಣ ಪುಣ್ಯಕಥೆಗಳನ್ನೊ, ರಾಮಾಯಣ, ಮಹಾಭಾರತ ಮುಂತಾದ ಮಹಾ ಗ್ರಂಥಗಳನ್ನೊ ಓದಿ ಹೇಳುತ್ತಿದ್ದರು ತುಂಗಮ್ಮನ ಹೃದಯಾಂತ ರಾಳದಿಂದ ಯಾವುದೋ ಅಂತರ್ವಾಣಿ ಅವಳು ಲೋಕೋದ್ಧಾರ ಮಾಡುವಂತಹ ಒಂದು ಜೀವಕ್ಕೆ ಜನ್ಮವೀಯುವುದಾಗಿ ಪ್ರೇರೇಪಿಸುತ್ತಿತ್ತು ಅಲ್ಲದೇ ಪ್ರತಿ ಏಕಾದಶಿ ದಿವಸ ಮನೆಗೆ ಬರುತ್ತಿದ್ದ ದಾಸರು ತುಂಗಮ್ಮನವರ ಮುಂದೆ ಅವಳಲ್ಲಿ ಜನಿಸುವ ಮಗು ಲೋಕೋದ್ಧಾರಕ್ಕಾಗಿಯೇ ಜನಿಸಿದಂತೆ ಮತ್ತು ನಾಡಿನಲ್ಲೆಲ್ಲಾ ಆದರ ಕೀರ್ತಿ ಪತಾಕೆ ಪಸರಿಸುತ್ತದೆ ಎಂದು ನುಡಿಯುತ್ತಿದ್ದರು

ದಾಸರು ಹೇಳಿದ ಭವಿಷ್ಯವಾಗಲೀ, ತುಂಗಮ್ಮನ ಹೃದಯಾಂತರಾಳದಿಂದ ಹೊರಟ ಅಂತರ್ವಾಣಿಯಾಗಲೀ ಸುಳ್ಳಾಗಲಿಲ್ಲ

ಪ್ರಶಸ್ತವಾದ ದಿನವೊಂದರಲ್ಲಿ ತುಂಗಮ್ಮ ಒಂದು ಸುಂದರವಾದ ತೇಜಸ್ವೀ ಹೆಣ್ಣುಮಗುವಿಗೆ ಜನ್ಮವಿತ್ತಳು

ತಮ್ಮ ಬಹು ಕಾಲದ ಕನಸು ನನಸಾಯಿತೆಂದು ಬಿಷ್ಟಪ್ಪ ದಂಪತಿಗಳು ಹಿಗ್ಗಿದರು ಸುಲಕ್ಷಣವಂತ ಮಗುವನ್ನು ಅನುಗ್ರಹಿಸಿದ ದೇವರನ್ನು ಮನಸ್ಸಿನಲ್ಲೇ ವಂದಿಸಿದರು ಮಗುವನ್ನು ನೋಡುತ್ತಿದ್ದರೆ ಬಿಷ್ಟಪ್ಪನವರಿಗಾಗಲೀ ತುಂಗಮ್ಮನಿಗಾಗಲೀ ಹೊತ್ತು ಹೋದುದೇ ತಿಳಿಯುತ್ತಿರಲಿಲ್ಲ ತಿರುಪತಿಯ ತಿಮ್ಮಪ್ಪನ ಕೃಪೆಯಿಂದ ಜನಿಸಿದ ಮಗುವಿಗೆ ಗಿರಿಯಮ್ಮನೆಂದು ನಾಮಕರಣ ಮಾಡಿದರು

* * * *

ಗಿರಿಯಮ್ಮ ಭಗವಂತನ ಪ್ರೇರಣೆಯಂತೆ ಅವಳ ಕಾರ್ಯಸಾಧನೆಗೆಂದೇ ಹುಟ್ಟಿದ್ದಳು ಅವಳ ದಿವ್ಯವಾದ ಮುಖದಲ್ಲಿನ ತೇಜಸ್ಸನ್ನು ಕಂಡು ಎಲ್ಲರೂ ಅಚ್ಚರಿ ಪಡುವವರೇ

ಮಗುವಿನ ಆಟಪಾಟಗಳು ಇತರ ಮಕ್ಕಳಿಗಿಂತಲೂ ಹೊರತಾಗಿದ್ದಿತು ಬಿಷ್ಟಪ್ಪನವರು ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಂಡು ದೇವರ ನಾಮಗಳನ್ನು ಹಾಡುತ್ತಿದ್ದರೆ ಅಥವಾ ಶ್ಲೋಕಗಳನ್ನು ಹೇಳಿಕೊಳ್ಳುತ್ತಿದ್ದರೆ ಮಗು ಅವರನ್ನೇ ಬಿಟ್ಟಗಣ್ಣಿನಿಂದ ನೋಡುತ್ತಾ ಕಿವಿಯನ್ನಾಲೈಸಿ ಮಲಗುತ್ತಿತ್ತು

ಬಿಷ್ಟಪ್ಪನವರು ದೇವರ ಪೂಜೆ ಮಾಡುವಾಗಲೂ, ಮಗುವಿನ ಶ್ರೇಯಸ್ಸನ್ನೇ ಕೋರುತ್ತಿದ್ದರು ದಿನೇ ದಿನೇ ಬೆಳೆಯುತ್ತಿದ್ದ ಮಗು ಹುಣ್ಣಿಮೆಯ ಚಂದ್ರನಂತೆ ಕಂಗೊಳಿಸುತ್ತಿತ್ತು ಕ್ರಮೇಣ ಗಿರಿಯಮ್ಮ ನಾಲ್ಕು ವರ್ಷದ ಹುಡುಗಿಯಾದಳು

ರಾತ್ರಿ ಮಲಗುವ ಮುಂಚೆ ಹೇಳಿಕೊಳ್ಳುವ ಶ್ಲೋಕ, ಮತ್ತೆ ಬೆಳಕು ಹರಿಯುತ್ತಿದ್ದಂತೆಯೇ ಎದ್ದ ಕೂಡಲೇ ಯಾವ ಶ್ಲೋಕ ಹೇಳಿಕೊಳ್ಳಬೇಕೆಂಬುದನ್ನು ಮಗುವಿಗೆ ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು ಹೇಳಿ ಕೊಡುತ್ತಿದ್ದರು ಬಿಷ್ಟಪ್ಪನವರು

ಅಂದು ಬಿಷ್ಟಪ್ಪನವರ ಮನೆಗೆ ಯಾರೋ ಅತಿಥಿಗಳು ಬಂದಿದ್ದರು ಬಂದ ಅತಿಥಿಗಳು ಗಿರಿಯಮ್ಮನ ಚಲನವಲನ, ಆಟಪಾಟಗಳನ್ನು ನೋಡಿ ಅವಳು ಕೇವಲ ಮಾನವೀಯಳಲ್ಲ ದೈವಾಂಶಸಂಭೂತಳು ಎನ್ನುವಷ್ಟು ಭಾವನೆ ಉಂಟಾಗಿತ್ತವರಲ್ಲಿ ಅಂದು ಬೆಳಕುಹರಿಯುವ ಮುಂಚೆಯೇ ಎದ್ದು ಹಾಸಿಗೆಯ ಮೇಲೇ ಕುಳಿತು, ತನ್ನೆರಡು ಕೈಗಳನ್ನೂ ಉಜ್ಜಿ ಅವನ್ನೇ ನೋಡಿಕೊಂಡು ಗಿರಿಯಮ್ಮ ತನ್ನ ಬಾಲಭಾಷೆಯಲ್ಲೇ ಶ್ಲೋಕವನ್ನು ಸ್ತುತಿಸಿದಳು

ಕರಾಗ್ರೇ ವಸತೇ ಲಕ್ಷ್ಮೀ
ಕರಮಧ್ಯೆ ಸರಸ್ವತಿ
ಕರಮೂಲೇ ತು, ಗೌರಿ ಸ್ಯಾತ್
ಪ್ರಭಾತೇ ಕರದರ್ಶನಂ

"ತುಂಗಮ್ಮ ನಿನ್ನ ಮಗಳು ಅಸಾದ್ಯಳಮ್ಮಾ, ಈ ಮಗು ಸಾಮಾನ್ಯಳಾದ

ಸ್ತ್ರೀಯಾಗಲಾರಳು, ಲೋಕಕಲ್ಯಾಣಕ್ಕಾಗಿ ಹುಟ್ಟಿದ ಮಗು ಇದು, ಎಂದವರು ತುಂಗಮ್ಮನೆದುರು ನುಡಿದರು ಗಿರಿಯಮ್ಮನಾದರೋ ತನ್ನ ಚಿಕ್ಕ ವಯಸ್ಸಿನಲ್ಲೇ ತಾಯಿಗೆ ಸಣ್ಣ ಪುಟ್ಟ ಕೆಲಸಗಳಲ್ಲಿ ನೆರವಾಗುತ್ತಿದ್ದಳು ತಂದೆ ದೇವರ ಪೂಜೆಗೆ ಕುಳಿತರೆಂದರೆ ಅವರ ಪೂಜೆಗೆಂದು ಹೂಬಿಡಿಸಿ ತಂದಿಡುತ್ತಿದ್ದಳು ತಂದೆಯು ಹೇಳಿಕೊಡುತ್ತಿದ್ದ ಹಾಡು ಶ್ಲೋಕಗಳನ್ನು ಅವರ ಪೂಜಾ ವೇಳೆಯ ಸಮಯದಲ್ಲಿ ಹಾಡಿ ಎಲ್ಲರನ್ನೂ ಸಂತೋಷಪಡಿಸುತ್ತಿದ್ದಳು

ಮನೆಗೆ ಬರುತ್ತಿದ್ದ ದಾಸರಂತೂ ಗಿರಿಯಮ್ಮನನ್ನು ಬಾಯಿ ತುಂಬಾ ಹೊಗಳುತ್ತಿದ್ದರು

"ಮಗುವಿಗೆ ದೇವರ ಅಂಶವಿದೆ ಇಲ್ಲವಾದಲ್ಲಿ ಈ ವಯಸ್ಸಿಗೇ ಸಂಸ್ಕೃತ ಶ್ಲೋಕವನ್ನು ಅರ್ಥಪೂರ್ಣವಾಗಿ ಹೇಳುವುದರೆಂದರೇನು ? ಈ ಮಗು ಮುಂದೆ ಅಸಾಮಾನ್ಯ ಸ್ತ್ರೀಯಾಗುವುದರಲ್ಲಿ ಸಂಶಯವಿಲ್ಲ ಸರಸ್ವತಿಯ ಪ್ರತಿಬಿಂಬವೇ ಕಾಣುತ್ತಿದೆ ಈ ಮಗುವಿನ ಮುಖದಲ್ಲಿ"

ಬಿಷ್ಟಪ್ಪನವರು ಮಗಳ ಭವಿಷ್ಯವನ್ನು ಆತುರದಿಂದ ನಿರೀಕ್ಷಿಸುತ್ತಿದ್ದರು ಸುತ್ತಮುತ್ತ ಜನರ ಕಣ್ಮಣಿಯಾಗಿ ಮನೆಯ ಬೆಳಕಾಗಿ ಬೆಳೆಯುತ್ತಿರುವ ಮಗುವಿನ ಆಟಪಾಟಗಳನ್ನು ಕಂಡು ಬಿಷ್ಟಪ್ಪನವರು ಮೈಮರೆತು ಕುಳಿತು ನೋಡುತ್ತಿದ್ದರೆ ಅಕ್ಕಪಕ್ಕದವರು ಈ ದೃಶ್ಯವನ್ನು ನೋಡಿ ಅವರನ್ನು ಬೇಕೆಂದೇ ಹಾಸ್ಯ ಮಾಡುತ್ತಿದ್ದುದುಂಟು

"ಏನಪ್ಪಾ ಬಿಷ್ಟಪ್ಪನವರು ಈ ರೀತಿ ಮಗುವನ್ನು ಮುದ್ದು ಮಾಡುತ್ತಾರೆ ಮುದ್ದು ಮಾಡಲು ಗಂಡೇ ? ಹೆಣ್ಣು "

ಜನರ ಅಪಹಾಸ್ಯಕ್ಕೆ ಅವರು ಸ್ವಲ್ಪವೂ ವಿಚಲಿತರಾಗದೆ ಉತ್ತರಿಸುತ್ತಿದ್ದರು "ಗಂಡು ಒಂದು ಮನೆ ಬೆಳಗಿದರೆ ಹೆಣ್ಣು ಎರಡು ಸಂಸಾರದ ಕುಲದೀಪವಾಗುತ್ತಾಳೆ ಮನುಷ್ಯನಿಗೆ ಕಣ್ಣು ಎಷ್ಟು ಪ್ರಾಮುಖ್ಯವೋ ಮನೆಗೆ ಹೆಣ್ಣು ಅಷ್ಟೇ ಮುಖ್ಯ"

ಗಿರಿಯಮ್ಮ ತನ್ನ ತಂದೆ ತಾಯಿಗಳನ್ನು ಬಹಳ ಕಾಲ ಉಳಿಸಿಕೊಳ್ಳುವ ಪುಣ್ಯವಂತಳಾಗಿರಲಿಲ್ಲ ಅವಳಿಗೆ ಕೇವಲ ನಾಲ್ಕು ವರುಷ ತುಂಬುತ್ತಿದ್ದಂತೆಯೇ

ತುಂಗಮ್ಮನವರೂ ಅವರ ಹಿಂದೆಯೇ ಬಿಷ್ಟಪ್ಪನವರೂ ದೈವಾಧೀನರಾದಾಗ ಗಿರಿಯಮ್ಮನ ಜವಾಬ್ದಾರಿ ಅವಳ ಚಿಕ್ಕಪ್ಪ ಚಿಕ್ಕಮ್ಮನ ತಲೆಯ ಮೇಲೆ ಬಿದ್ದಿತು

ತಂದೆತಾಯಿಗಳನ್ನು ಕಳೆದುಕೊಂಡ ಗಿರಿಯಮ್ಮನಿಗೆ ಚಿಕ್ಕಪ್ಪ ಚಿಕ್ಕಮ್ಮನ ಪ್ರೀತಿವಿಶ್ವಾಸಗಳಲ್ಲಿ, ತಂದೆತಾಯಿಗಳನ್ನು ಮರೆಯುವಂತಾಯ್ತು ಅವಳ ನಡವಳಿಕೆಗಳು, ಮಾತುಕತೆ ಮೊದಲಾದುವು, ಸಹಜ ನಡವಳಿಕೆಗಿಂತಲೂ ದೂರವಾಗಿದ್ದು, ಅವಳ ದೈಹಿಕ, ಮಾನಸಿಕ, ಬೌದ್ಧಿಕ ಬೆಳವಣಿಗೆಯೂ ವಯಸ್ಸಿಗೆ ಮೀರಿದವಾಗಿದ್ದವು ಒಂದು ಬಾರಿ ಪಕ್ಕದ ಮನೆಯವರು ಗೋಕುಲಾಷ್ಟಮಿಯ ಪ್ರಯುಕ್ತ ಕೃಷ್ಣನಿಗೆ ತೊಟ್ಟಿಲು ಹಾಕಿದ್ದು ಗಿರಿಯಮ್ಮನ ಮನೆಯವರನ್ನೆಲ್ಲಾ ಅರಿಸಿನ ಕುಂಕುಮಕ್ಕೆ ಕರೆದಿದ್ದರು

ಪುಟ್ಟ ಬೆಳ್ಳಿಯ ತೊಟ್ಟಿಲು, ಅದರೊಳಗೆ ಅಂಬೆಗಾಲಿನ ಕೃಷ್ಣನ ಮೂರ್ತಿಯನ್ನೇ ತನ್ನ ತನುಮನಗಳಲ್ಲಿ ತುಂಬಿಕೊಂಡಳು ಗಿರಿಯಮ್ಮ ಆ ವಯಸ್ಸಿಗೇ ಕೃಷ್ಣನನ್ನು ತಾನು ಎತ್ತಿ ಆಡಿಸಿದಂತಹ ಅನುಭವ ಆ ಮುಗ್ಧೆಗೆ ಕೃಷ್ಣನ ರೂಪವನ್ನೇ ನೋಡುತ್ತಾ ಪುಲಕಿತಗೊಂಡ ಅವಳು ತನ್ನ ಚಿಕ್ಕಪ್ಪ ಹೇಳಿ ಕೊಟ್ಟಿದ್ದ ಪುರಂದರದಾಸರ ದೇವರನಾಮ

ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಯುತಾನಂತನ
ತೂಗಿರೆ ವರಗಿರಿಯಪ್ಪ ತಿಮ್ಮಪ್ಪನ ತ॰ಗಿರೆ ಕಾವೇರಿ ರಂಗಯ್ಯನ ||ಅ ||

ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ । ನಾಗಕನ್ನಿಕೆಯರು ತೂಗಿರೆ ||
ನಾಗವೇಣಿಯರೆ ನೇಣ ಪಿಡಿದುಕೊಂಡು । ಬೇಗನೇ ತೊಟ್ಟಿಲ ತೂಗಿರೆ ||೧ ||

ಇಂದ್ರಲೋಕದಲ್ಲುಪೇಂದ್ರ ಮಲಗ್ಯಾನೆ । ಇಂದುಮುಖಿಯರೆಲ್ಲ ತೂಗಿರೆ ||
ಇಂದ್ರ ಕನ್ನಿಕೆಯರು ಚಂದದಿ ಬಂದು ಮು। ಕುಂದನ ತೊಟ್ಟಿಲ ತೂಗಿರೆ ||೨ ||

ಆಲದೆಲೆಯ ಮೇಲೆ ಶ್ರೀಲೋಲ ಮಲಗ್ಯಾನೆ । ನೀಲ ಕುಂತಲೆಯರು ತೂಗಿರೆ ||
ವ್ಯಾಳಶಯನ ಹರಿ ಮಲಗು ಮಲಗುಯೆಂದು । ಬಾಲಕೃಷ್ಣಯ್ಯನ ತೂಗಿರೆ ||೩ ||

ಸಾಸಿರ ನಾಮನ ಸರ್ವೋತ್ತಮನೆಂದು । ಸೂಸುತ್ತ ತೊಟ್ಟಿಲ ತೂಗಿರೆ ||
ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ । ತರಳನ ತೊಟ್ಟಿಲ ತೂಗಿರೆ ||
ಶಿರಿದೇವಿ ರಮಣನೆ ಪುರಂದರ ವಿಠಲನೆ । ಕರುಣದಿ ಮಲಗೆಂದು ತೂಗಿರೆ ||೪ ||

ಎಂದು ಮುದ್ದಾಗಿ ಹಾಡಿದಾಗ ಅಲ್ಲಿ ನೆರೆದಿದ್ದ ಹೆಂಗೆಳೆಯರೆಲ್ಲಾ ಅವಳ ಸಂಗೀತ ಸುಧೆಗೆ ಬೆರಗಾಗಿ ಅವಳಿಗೆ ದೃಷ್ಟಿ ತೆಗೆಯಲೆಂದು ನೆಟಿಗೆ ಮುರಿದರು ಅವಳನ್ನು ಅಪ್ಪಿ ಕೊಂಡಾಡಿದರು

ಅಂದಿನಿಂದಲೂ ಗಿರಿಯಮ್ಮನ ಪಾಲಿಗೆ ಶ್ರೀ ಕೃಷ್ಣನು ಅವಳ ಮಗುವಿನಂತಾದನು ಅವಳಿಗೆ ಇತರ ಯಾವ ಆಟವೂ ಬೇಡವಾದವು

ಕೃಷ್ಣನ ವಿಗ್ರಹವನ್ನೆತ್ತಿಕೊಂಡು ಆದಕ್ಕೆ ಅಲಂಕರಿಸುವುದು, ಅವಳು ತನ್ನ ಗೆಳತಿಯರೊಡನೆ ಆಡುತ್ತಿದ್ದ ಆಟಪಾಟಗಳೂ ದೇವರಿಗೆ ಸಂಬಂಧಿಸಿದಂತಹ ಆಟಗಳೇ ಆಟದ ಸಮಯದಲ್ಲಿ ಕೃಷ್ಣನ ವಿಗ್ರಹದೊಂದಿಗೆ ಮಾತನಾಡುತ್ತಿದ್ದ ಗಿರಿಯಮ್ಮನನ್ನು ಕಂಡು ಅವಳ ಗೆಳತಿಯರು ನಕ್ಕರೆ, ಗಿರಿಯಮ್ಮ ಕೋಪಿಸಿ ಅವರಿಗನ್ನುತ್ತಿದ್ದಳು "ಶ್, ಸುಮ್ಮನಿರಿ ಮಗುವಿಗೆ ಕೋಪ ಬಂದೀತು" ಅವಳ ಆಟಪಾಟಗಳಲ್ಲಿ ಅವಳೊಂದಿಗೆ ಬೆರೆತ ಅವಳ ಸಂಗಡಿಗರಾರೂ ಎಂದೂ ಅವಳೊಡನೆ ಜಗಳವಾಡಲು ಬಯಸುತ್ತಿರಲಿಲ್ಲ ಇದರಿಂದಾಗಿ ಅವಳು ತನ್ನ ಗೆಳತಿಯರೆಲ್ಲರ ವಿಶ್ವಾಸವನ್ನೂ ಗಳಿಸಿದ್ದಳು

ಗಿರಿಯಮ್ಮನಿಗೆ ಪಾರ ಪ್ರವಚನಗಳ ಜತೆಗೆ ಪುರಂದರದಾಸರ ದೇವರ ನಾಮಗಳನ್ನೂ ಕನಕದಾಸರ ಕೃತಿಗಳನ್ನೂ ಅವಳ ಚಿಕ್ಕಪ್ಪನವರು ಹೇಳಿ ಕೊಡಲಾರಂಬಿಸಿದರು

ಪೂರ್ವ ಜನ್ಮದ ಸಂಸ್ಕಾರ ವಿಶೇಷದಿಂದ ಭಗವದ್ಭಕ್ತಿಯು ಗಿರಿಯಮ್ಮನಿಗೆ ರಕ್ತಗತವಾಗಿತ್ತು ಪ್ರಾಪಂಚಿಕ ಸುಖಸೌಭಾಗ್ಯದ ಬಗ್ಗೆ ಅವಳಿಗೆ ಆಸಕ್ತಿಯಿರಲಿಲ್ಲ ಒಂದು ದಿನ ಅವಳೂ ಅವಳ ಗೆಳತಿಯರೂ ಮಾತನಾಡುತ್ತಿರುವಾಗ, ಮಾತಿನ ಮಧ್ಯೆ ಮಾತು ಬೆಳೆದು, ದೇವರುಗಳಲ್ಲಿ ಹರಿಯೇ ಶ್ರೇಷ್ಠನೆಂದು ಹಲವರೂ, ಹರನೇ ಶ್ರೇಷ್ಠನೆಂದು ಮತ್ತೆ ಹಲವರೂ ವಾದ ಮಾಡತೊಡಗಿದಾಗ, ವಿಷ್ಣು ಸರ್ವೋತ್ತಮತ್ವವನ್ನು ಅವಳು ತನ್ನ ಗೆಳತಿಯರಿಗೆ ವಿವರಿಸಿ, ಅವರನ್ನು ಸಮಾಧಾನಪಡಿಸಿದ್ದಾಳೆ ಅವಳ ವಾದ ಸರಣಿಯಿಂದ ತೃಪ್ತರಾದ ಅವಳ ಗೆಳತಿಯರು ಅವಳನ್ನು ಕೇವಲ ಗೆಳತಿ ಎಂದು ಮಾತ್ರವಲ್ಲದೆ ಗೌರವಭಾವದಿಂದಲೂ ಕಾಣತೊಡಗಿದರು

ದೇವತಾಮೂರ್ತಿಗಳು ಅವಳ ಆಟಿಕೆಗಳಾಗಿದ್ದಂತೆ ಗಿರಿಯಮ್ಮ ಚಿಕ್ಕಪ್ಪ ತನಗೆ ಹೇಳುತ್ತಿದ್ದ ದೇವರ ಕಥೆಗಳನ್ನು ತನ್ನ ಗೆಳತಿಯರ ಮುಂದೆ ಅವರ ಮನಸ್ಸಿಗೆ ನಾಟುವಂತೆ ಹೇಳುತ್ತಿದ್ದಳು

ಒಂದು ಸಂಜೆ ಗಿರಿಯಮ್ಮ ತನ್ನ ಸ್ನೇಹಿತಿಯರೊಡಗೂಡಿ ಮನೆಯ ಅಂಗಳದಲ್ಲಿ ಕುಳಿತು ಆಟವಾಡುತ್ತಿದ್ದಾಳೆ ಆಟದಲ್ಲಿ ಅವಳೇ ತಾಯಿ. ಕೃಷ್ಣನ ಪ್ರತಿಮೆಯೊಂದು ಅವಳ ಮಗು

ಗಿರಿಯಮ್ಮನ ಚಿಕ್ಕಮ್ಮ ತನ್ನ ನೆರೆಹೊರೆ ಹೆಂಗೆಳೆಯರೊಡಗೂಡಿ ಮನೆಯ ಅಂಗಳದಲ್ಲಿ ಕುಳಿತು ಹೊತ್ತು ಕಳೆಯುವುದಕ್ಕಾಗಿ ಹರಟೆಗಾರಂಬಿಸಿದ್ದಾರೆ ಇದೇ ವೇಳೆಗೆ ಸರಿಯಾಗಿ ಕಣಿ ಹೇಳುವ ಹೆಂಗಸೊಬ್ಬಳು ಅಲ್ಲಿಗೆ ಬಂದಳು ಮುಂದಿನ ಬವಿಷ್ಯವನ್ನೆಲ್ಲಾ ತಾನು ಸ್ವಾರಸ್ಯವಾಗಿ ಹೇಳುವುದಾಗಿ ಅವಳು ನುಡಿದಾಗ, ಹೆಂಗಳೆಯರೆಲ್ಲರೂ, ತಮ್ಮ ತಮ್ಮ ಭವಿಷ್ಯದ ಬಗ್ಗೆ ಕುತೂಹಲ ತಳೆದು ಅವಳ ಮುಂದೆ ತಮ್ಮ ಕೈನೀಡಿದ್ದಾರೆ ಕಣಿ ಹೇಳುವವಳ ರಾಗವನ್ನು ಕೇಳಿ ಕುತೂಹಲಗೊಂಡು ಗಿರಿಯಮ್ಮನೂ ಅವಳ ಸಂಗಡಿಗರೂ ಅಲ್ಲಿಗೆ ಬಂದು ಸುತ್ತುವರಿದು ಕುಳಿತಿದ್ದಾರೆ

ಕಣಿ ಹೇಳುವವಳ ದೃಷ್ಟಿ, ಆದೇ ತಾನೇ ಎದುರಿಗೆ ಬಂದು ಕುಳಿತ ಕಿಶೋರಿಯತ್ತ ಹರಿಯಿತು

ಶಂಕುಳಲ್ಲಿ ಅಲಂಕರಿಸಿದ ಕೃಷ್ಣನ ಮೂರ್ತಿ ಕುತೂಹಲದಿಂದ ಅಗಲಿಸಿದ್ದ ವಿಶಾಲವಾದ ನೇತ್ರಗಳು, ದೈವೀಕ ಕಳೆಯಿಂದ ಕೂಡಿದ ಮುಖಕಮಲ, ಕಣಿ ಹೇಳುವವಳು ತಾನೇ ಬಲವಂತವಾಗಿ ಗಿರಿಯಮ್ಮನ ಹಸ್ತವನ್ನು ತನ್ನೆಡೆಗೆಳೆದು ಕೊಂಡಳು ಗಿರಿಯಮ್ಮನ ಹಸ್ತರೇಖೆಗಳನ್ನು ನೋಡುತ್ತಿದ್ದಂತೆಯೇ ಕೊರವಂಜಿಯ ಮುಖಭಾವನೆಗಳು ವಿಸ್ಮಿತಗೊಂಡವು ಅವಳು ನುಡಿದುದ್ದೊಂದೇ

"ಈ ಹುಡುಗಿಯದು ಪುಣ್ಯಜೀವ ಈ ಹುಡುಗಿಯ ಬಾಳು ಲೋಕ ಕಲ್ಯಾಣಕ್ಕಾಗಿಯೇ ವಿನಃ ಅವಳ ಸ್ವಾರ್ಥಕ್ಕಾಗಲೀ ಸಂಸಾರ ನಡೆಸುವುದಕ್ಕಾಗಲೀ ಅಲ್ಲ ಈ ಕೈ ಸಾಕ್ಷಾತ್ ಆ ಪರಮಾತ್ಮನನ್ನೇ ಎತ್ತಿ ಆಡಿಸಿದ ಕೈಯಂತಿದೆ"

ಅಲ್ಲಿ ನೆರೆದಿದ್ದವರೆಲ್ಲಾ ಕೊರವಂಜಿಯ ಮಾತು ಕೇಳಿ ಅಚ್ಚರಿಗೊಂಡರು ಈ ವಿಷಯ ಬಾಯಿಂದ ಬಾಯಿಗೆ ಹರಡಿ ಗಿರಿಯಮ್ಮನ ಬಗ್ಗೆ ಎಲ್ಲರಿಗೂ

ಆದರಾಬಿಮಾನಗಳ ಜತೆ ಗೌರವವೂ ಮೂಡಿತು ಹಿರಿಯರಿಗಂತೂ ಗಿರಿಯಮ್ಮ ದೇವಲೋಕದಿಂದ ಇಳಿದುಬಂದ ದೇವತೆಯಂತೆ

ಗಿರಿಯಮ್ಮನ ವಿದ್ಯಾಭ್ಯಾಸವೂ ಅವಳ ಮನೆಯಲ್ಲಿಯೇ ಅವಳ ಚಿಕ್ಕಪ್ಪನೇ ಅವಳಿಗೆ ಮನೆಯಲ್ಲೇ ಓದು ಬರಹ ಕಲಿಸತೊಡಗಿದ್ದರು ಇಷ್ಟೇ ಅಲ್ಲದೆ ಅವಳ ಇಷ್ಟಾನುಸಾರವಾಗಿ ಅವಳನ್ನು ಸಂಜೆಯ ಹೊತ್ತು ಹರಿಕಥೆಗಳಿಗೆ ಕರೆದುಕೊಂಡು ಹೋಗಿಬರುತ್ತಿದ್ದರು ಮನೆಯಲ್ಲೂ ರಾಮಾಯಣ, ಮಹಾಬಾರತ ಮುಂತಾದ ಪ್ರವಚನಗಳನ್ನು ಏರ್ಪಾಡುಮಾಡುತ್ತಿದ್ದರು

ಎಲ್ಲಕ್ಕಿಂತಲೂ ಮಿಗಿಲಾಗಿ ಮನೆಗೆ ಬರುತ್ತಿದ್ದ ದಾಸರು ತಂಬೂರಿ ಮೀಟಿ ನರ್ತಿಸುತ್ತಾ ದೇವರ ಪದಗಳನ್ನು ಹೇಳುತ್ತಿದ್ದರು ದಾಸರ ಬಕ್ತಿಯ ನರ್ತನ ಅವಳ ಮೇಲೆ ಪ್ರಭಾವ ಬೀರಿತ್ತು

ಕ್ರಮೇಣ ಗಿರಿಯಮ್ಮ ಕೀರ್ತನೆಗಳನ್ನು ಹಾಡುತ್ತಾ ನರ್ತಿಸುವುದನ್ನು ಕಲಿತುಕೊಂಡಳು ಅವಳು ನರ್ತಿಸುತ್ತಿದ್ದರೆ ವೇದಘೋಷಗಳು ಮೊಳಗಿದಂತಾಗುತ್ತಿತ್ತು

ಕಾಲಕ್ರಮದಲ್ಲಿ ಗಿರಿಯಮ್ಮ ಸದ್ಗುಣಗಳ ಸಂಪನ್ನೆಯಾಗಿ ಯೌವನಸ್ಥಳಾಗಿದ್ದಾಳೆ ಅವಳ ವಿವಾಹ ಮಾಡಬೇಕೆಂಬ ಉದ್ದಿಶ್ಯದಿಂದ ಅವಳ ಚಿಕ್ಕಪ್ಪ ವರಾನ್ವೇಷಣೆಯಲ್ಲಿ ತೊಡಗಿದ್ದಾರೆ ಗಿರಿಯಮ್ಮ ಶ್ರೀ ಕೃಷ್ಣಪರಮಾತ್ಮನ ಶಿಶುರೂಪದಲ್ಲಿ ಮೋಹಿತಳಾದ ಕಾರಣ ತನ್ನ ವಿವಾಹದ ಬಗ್ಗೆ ಮನೆಯವರು ಪ್ರಯತ್ನ ನಡೆಸಿದಾಗ, ಅವಳು ಪ್ರತಿಭಟಿಸಲಿಲ್ಲವೆಂಬ ಅಂಶ ಇಲ್ಲಿ ಮನದಟ್ಟಾಗುತ್ತದೆ

ಮದುವೆಗೆ ಮನ ಸಮ್ಮತಿಸಿದರೂ ಗಿರಿಯಮ್ಮ ತನ್ನ ಮದುವೆ ಬಗ್ಗೆ ಯಾವ ಬಗೆಯ ಆಶಾಗೋಪುರಗಳನ್ನು ಎಂದೂ ಕಟ್ಟಿದವಳಲ್ಲ ಅವಳ ಮನಸ್ಸು ಸದಾಕಾಲವೂ ಭಗವಂತನ ಬಕ್ತಿರಸದ ಬಗ್ಗೆ ಚಿಂತಿಸುತ್ತಿತ್ತು

* * * *

ಗಿರಿಯಮ್ಮ ಪ್ರತಿದಿನವೂ ನಸುಕಿನಲ್ಲೇ ಎದ್ದು ಮನೆಯ ಮುಂದಿನ ಅಂಗಳವನ್ನು ಸಾರಿಸಿ, ದೇವರನಾಮ ಹೇಳಿಕೊಳ್ಳುತ್ತಾ ರಂಗವಲ್ಲಿ ಹಾಕುವುದರಲ್ಲಿ ಮೈಮರೆಯುತ್ತಿದ್ದಳು ಅವಳು ಹಾಡುವುದನ್ನೇ ಕೇಳುತ್ತಾ ಅಕ್ಕಪಕ್ಕದವರು ತಮ್ಮ

ಕೆಲಸವನ್ನೂ ಮರೆತು ಭಾವಪರವಶರಾಗುತ್ತಿದ್ದರು ಮಲೆಬೆನ್ನೂರಿನ ರಂಗನಾಥ ಸ್ವಾಮಿಯ ದೇವಸ್ಥಾನ, ಅಲ್ಲಿಯ ಸ್ಥಳದ ಮಹಿಮೆಯನ್ನು ಅವರಿವರ ಬಾಯಿಂದ ಕೇಳಿಸಿಕೊಂಡಿದ್ದ ಗಿರಿಯಮ್ಮ ಒಂದು ಬಾರಿ ಆ ಕ್ಷೇತ್ರಕ್ಕೇ ಬರುವ ಅವಕಾಶವೂ ಒದಗಿಬಂದಿತ್ತು ನೆಂಟರಿಷ್ಟರೊಬ್ಬರ ಲಗ್ನಕ್ಕಾಗಿ ಮಲೆಬೆನ್ನೂರಿಗೆ ಗಿರಿಯಮ್ಮ ಮನೆಯವರೊಡನೆ ಬಂದಿದ್ದಳು ಹೆಳವನಕಟ್ಟೆಯ ಕೆರೆ ಮತ್ತು ಶ್ರೀ ರಂಗನಾಥ ಸ್ವಾಮಿಯ ದೇವಸ್ಥಾನ ಅವಳ ಮನ ಸೆರೆಹಿಡಿದಿತ್ತು ಅಂದು ರಂಗನಾಥಸ್ವಾಮಿ ದೇವಸ್ಥಾನದಲ್ಲಿ ರಥೋತ್ಸವ ಗಿರಿಯಮ್ಮ ತಮ್ಮ ಸಂಗಡಿಗರೊಡಗೂಡಿ ದೇವಸ್ಥಾನಕ್ಕೆ ಪ್ರಾತಃಕಾಲದಲ್ಲೇ ಎದ್ದುಬಂದು ದೇವಸ್ಥಾನದ ಮುಂದಿನ ಪ್ರಾಕಾರವನ್ನು ಶುದ್ಧಗೊಳಿಸಿ ರಂಗವಲ್ಲಿ ಬಿಡಿಸುತ್ತ ಹಾಡತೊಡಗಿದ್ದಾಳೆ ಉಡುಪಿ ಯಾತ್ರೆಗೆ ಹೊರಟಿದ್ದ ಗೋಪಾಲದಾಸರು ತಮ್ಮ ಶಿಷ್ಯರೊಂದಿಗೆ ಅಲ್ಲಿಗೆ ಬಂದಿದ್ದಾರೆ ಶ್ರೀ ರಂಗನಾಥನ ದರುಶನ ಪಡೆದು ಮುಂದಿನ ಪ್ರಯಾಣ ಮಾಡೋಣವೆಂದು ದಾಸರ ಹೆಬ್ಬಯಕೆಯಾಗಿತ್ತು ದೇವಸ್ಥಾನದ ಪ್ರಾಕಾರದಲ್ಲಿ ಕುಳಿತು ರಂಗೋಲಿ ಬಿಡಿಸುತ್ತಿದ್ದ ಗಿರಿಯಮ್ಮ ದಾಸರ ದೃಷ್ಟಿಗೆ ಬಿದ್ದಳು ದಾಸರು ರಂಗೋಲಿಯಲ್ಲಿ, ಗಿರಿಯಮ್ಮ ಬಿಡಿಸಿದ ಕೃಷ್ಣನ ಚಿತ್ರವನ್ನು ನೋಡಿ ಸಂತುಷ್ಟರಾದರು ಅವಳ ಪದವನ್ನು ಕೇಳಿ ಸಂತೃಪ್ತರಾದ ಅವರು ಪೂಜೆಯಾದನಂತರ, ಅವಳಿಗೆ ಪ್ರಸಾದವಿತ್ತು, ಹೆಳವನಕಟ್ಟೆ ರಂಗನಾಥ ಸ್ವಾಮಿಯ ಅನುಗ್ರಹದಂತೆ ಅವಳು ಅನೇಕ ದೇವರನಾಮಗಳನ್ನು ಸ್ವಾಮಿಯ ಅಂಕಿತದಲ್ಲೇ ರಚಿಸುವಂತಾಗಲಿ'' ಎಂದು ಅವಳನ್ನು ಅನುಗ್ರಹಿಸಿ, ತಮ್ಮ ಮುಂದಿನ ಪ್ರಯಾಣ ಬೆಳೆಸಿದರು

*   *   *   *

ಹರಿಹರ ತಾಲ್ಲೂಕಿನ ಮಲೆಬೆನ್ನೂರಿನ ಶ್ಯಾನುಬೋಗರು ಕೃಷ್ಣಪ್ಪನವರು, ತಮ್ಮ ಮಗನಾದ ತಿಪ್ಪರಸನಿಗೆ ಕನ್ಯಾನ್ವೇಷಣೆಯಲ್ಲಿ ತೊಡಗಿದ್ದರು ಅಂತೆಯೇ ಗಿರಿಯಮ್ಮನ ಚಿಕ್ಕಪ್ಪನವರ ವಿಷಯವನ್ನು ಮೂರನೆಯವರ ಬಾಯಿಂದ ಕೇಳಿ ತಿಳಿದುಕೊಂಡ ಅವರು ಗಿರಿಯಮ್ಮನನ್ನು ತಮ್ಮ ಮನೆಗೆ ತಂದುಕೊಳ್ಳುವ ಅಭಿಲಾಷೆಯಿಂದ ಪತ್ರವ್ಯವಹಾರ ನಡೆಸಿದರು

ವರನ ಕಡೆಯವರು ಹುಡುಗಿಯನ್ನು ನೋಡಲು ಬರುತ್ತಾರೆಂದು ತಿಳಿದ

ಕೂಡಲೇ ಅವರ ಸ್ವಾಗತಕ್ಕಾಗಿ ಮನೆಯಲ್ಲಿ ಸಿದ್ಧತೆಗಳು ನಡೆಯಲಾರಂಬಿಸಿದ್ದವು ವರನ ಕಡೆಯವರು ಬರುವರೆಂಬ ಸುದ್ದಿ ಕೇಳಿ ತಿಳಿದ ಗಿರಿಯಮ್ಮನ ಗೆಳತಿಯರು ಅವಳನ್ನು ಹಾಸ್ಯಮಾಡತೊಡಗಿದರು

"ಇನ್ನು ಗಿರಿಯಮ್ಮನಿಗೇನಮ್ಮ ಕಡಿಮೆ ಮದುವೆಯಾಗಿ ಅತ್ತೆಯ ಮನೆಗೆ ಹೊರಟುಹೋಗುತ್ತಾಳೆ ಮಕ್ಕಳಾದ ಮೇಲೆ ಕೃಷ್ಣನನ್ನು ಎತ್ತಿಕೊಳ್ಳುವುದನ್ನು ಬಿಡುತ್ತಾಳೇನೋ ನೋಡಬೇಕು"

ಗಿರಿಯಮ್ಮ ಅವರ ಮಾತಿಗೆ ನಸುನಗುತ್ತಿದ್ದಳು ಕೃಷ್ಣನೇ ನನ್ನ ನರ ನಾಡಿಗಳಲ್ಲೂ ತುಂಬಿರುವಾಗ ಬೇರೆ ಯಾರಾದರೂ ನನ್ನ ಮಕ್ಕಳಾಗಲು ಸಾಧ್ಯವೇ ಎಂಬ ಗಾಢವಾದ ಪ್ರಶ್ನೆ ಅವಳ ಅಂತರಾಳದಲ್ಲಿದ್ದು ಅವಳನ್ನು ಉತ್ತರಿಸದಂತೆ ಮಾಡುತ್ತಿತ್ತು

ಶ್ಯಾನುಬೋಗ ಕೃಷ್ಣಪ್ಪನವರು ತಮ್ಮ ಕುಟುಂಬದೊಡನೆ ರಾಣಿಬೆನ್ನೂರಿಗೆ ಬಂದಾಗ ಆವರನ್ನು ಗಿರಿಯಮ್ಮನ ಚಿಕ್ಕಪ್ಪನವರು ಆದರದಿಂದ ಬರಮಾಡಿಕೊಂಡರು ಬಂದವರಿಗೆ ಸುಖಾಸನವನ್ನು ನೀಡಿ ಅವರ ಕ್ಷೇಮ ಸಮಾಚಾರ ವಿಚಾರಿಸಿದ್ದಾಯಿತು

ಬಂದ ಅತಿಥಿಗಳಿಗೆ ಉಪಹಾರ, ಲೋಕಾಬಿರಾಮವಾಗಿ ಮಾತುಕತೆಗಳಾದ ನಂತರ ಗಿರಿಯಮ್ಮನ ಚಿಕ್ಕಪ್ಪನವರು, ಕೃಷ್ಣಪ್ಪನವರನ್ನು ವಿನಯದಿಂದ ಕೇಳಿದರು

"ವಧುವನ್ನು ಕರೆದುಕೊಂಡು ಬರೋಣವೇ ?"

ಕೃಷ್ಣಪ್ಪನವರ ಮಗ್ಗುಲಿಗೇ ಸಿಂಗರಿಸಿಕೊಂಡು ಗಂಬೀರವಾಗಿ ಕುಳಿತಿದ್ದ ಅವರ ಮಗ ತಿಪ್ಪರಸನ ಮುಖದಲ್ಲಿ ಕುತೂಹಲ ಮೂಡಿತು ಅವನ ದೃಷ್ಟಿ ಚಟುವಟಿಕೆಯಿಂದ ಅತ್ತಿತ್ತ ಸರಿದಾಡಿತು ಆನಂದದಿಂದ ಅವನ ಮುಖ ಹಿಗ್ಗಿತು

ನಡುಮನೆಯ ಮಗ್ಗುಲಿಗೇ ಇದ್ದ ಕೋಣೆಯೊಳಗೆ ಗಿರಿಯಮ್ಮನನ್ನು ಸಿಂಗರಿಸಿ ಕೂಡಿಸಿದ್ದರು

ಹೆಂಗೆಳೆಯರ ಮಧ್ಯೆ ಕುಳಿತಿದ್ದ ಗಿರಿಯಮ್ಮನನ್ನು ನಡುಮನೆಗೆ ಕರೆದು ತರುವಂತೆ ಹೆಂಡತಿಗೆ ತಿಳಿಸಿದರು, ಗಿರಿಯಮ್ಮನ ಚಿಕ್ಕಪ್ಪ

ತಲೆಬಗ್ಗಿಸಿಕೊಂಡು ನಿಧಾನವಾಗಿ ವಧು ನಡುಮನೆಗೆ ಬಂದಾಗ ಅವಳು ಮುಡಿದಿದ್ದ ಮಲ್ಲಿಗೆ ತನ್ನ ಒಡತಿಯ ಆಗಮನವನ್ನು ಎಲ್ಲರಿಗೂ ತಿಳಿಸಿತ್ತು

ಮೊದಲೇ ಸೂಚಿಸಿದ್ದಂತೆ ಗಿರಿಯಮ್ಮ ಹಿರಿಯರಿಗೆಲ್ಲಾ ನಮಸ್ಕರಿಸಿ ಅಲ್ಲೇ ಪ್ರತ್ಯೇಕವಾಗಿ ಹೆಂಗಸರಿಗೆ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತಳು ಅವಳ ಅಕ್ಕಪಕ್ಕದಲ್ಲಿ ಅವಳ ಚಿಕ್ಕಮ್ಮ ಮತ್ತು ಉಳಿದ ಹೆಂಗೆಳೆಯರೂ ಕುಳಿತರು

ಸುಲಕ್ಷಣವಾದ ಕನ್ಯೆ ಹಾಲುಬಿಳುಪಿನ ಮುಖಕ್ಕೆ ಪೂಸಿದ್ದ ಅರಿಸಿನ ಅವಳ ಮುಖದ ದೈವೀಕಳೆಯನ್ನು ಹೆಚ್ಚಿಸಿತ್ತು ತಲೆಯ ತುಂಬು ಕೂದಲನ್ನು ಓರಣವಾಗಿ ಬಾಚಿ ರಾಗಟೆ, ಗೊಂಡ್ಯಗಳಿಂದ ಅಲಂಕರಿಸಿದ್ದರು ಅವಳು ಮುಡಿದ ಮಲ್ಲಿಗೆಯ ಸೌರಭ ತಾನು ಅವಳಿಗೇನೂ ಕಡಿಮೆ ಎಂಬಂತೆ ಅವಳ ಸೌಂದರ್ಯದೊಡನೆ ಸ್ಪರ್ಧಿಸುತ್ತಿತ್ತು ಬಿಲ್ಲಿನಂತೆ ಬಾಗಿದ ಹುಬ್ಬುಗಳ ನಡುವೆ ಇಟ್ಟ ಕುಂಕುಮದ ಬೊಟ್ಟು, ಅವಳ ಮುಗ್ಧ ನಯನಗಳ ನೋಟ, ನೀಳವಾದ ನಾಸಿಕದಲ್ಲಿ ನಕ್ಷತ್ರದಂತೆ ಮಿನುಗುವ ಪುಟ್ಟ ಮೂಗುತಿ, ಎರಡು ಕೈಗಳ ತುಂಬಾ ಕಿಣಿ ಕಿಣಿ ನಾದಮಾಡುವ ಬಳೆಗಳು, ಅದೇ ತಾನೇ ಅಭ್ಯಸಿಸಿ ಉಟ್ಟಿದ್ದ ಜರಿಯ ಪತ್ತಲದಲ್ಲಿ, ದೇವಲೋಕದಿಂದಿಳಿದು ಬಂದ ರಂಭೆಯಂತೆ ಎಲ್ಲರ ಕಣ್ಣಿಗೆ ಕಂಗೊಳಿಸಿದಳು ಆ ಬಾಲೆ ವರನ ಕಡೆಯವರು ಅವಳ ಸಾತ್ವಿಕ ಸೌಂದರ್ಯವನ್ನೇ ಮೂಕರಾಗಿ ವೀಕ್ಷಿಸುತ್ತಿದ್ದರು

ಮೌನ ಮುರಿಯಲೆಂಬಂತೆ ಗಿರಿಯಮ್ಮನ ಬಗ್ಗೆ ಅವಳ ಚಿಕ್ಕಮ್ಮನೇ ಹೇಳತೊಡಗಿದರು

"ಹುಡುಗಿಯ ರೂಪವನ್ನು ನಾನು ಬಣ್ಣಿಸಲಾರೆ ಹುಡುಗಿಯ ಗುಣದ ಬಗ್ಗೆ ಹೇಳಬೇಕೆಂದರೆ ದೇವರಲ್ಲಿ ಇವಳಿಗೆ ಅಚಲವಾದ ಭಕ್ತಿಯಿದೆ ಗುರು ಹಿರಿಯರ ಬಗ್ಗೆ ಗೌರವ ಹಾಗೂ ನಿಸ್ವಾರ್ಥತೆ ಇವಳಿಗೆ ದೈವದತ್ತವಾಗಿ ಬಂದಿರುವ ಗುಣಗಳು "

"ಹಾಡು ಹಸೆ ಹೇಳ್ತಾಳೇನು ?"

"ಸಂಗೀತ ಅವಳಿಗೇಂತ ಪ್ರತ್ಯೇಕವಾಗಿ ಹೇಳಿಸಿಲ್ಲ ದೇವರನಾಮಗಳನ್ನು ಚೆನ್ನಾಗಿ ಹೇಳ್ತಾಳೆ "

"ಗಿರಿಯಮ್ಮ ಒಂದು ದೇವರನಾಮ ಹೇಳಮ್ಮಾ ತಾಯಿ "

ಕೃಷ್ಣಪ್ಪನವರು ನುಡಿದಾಗ ಗಿರಿಯಮ್ಮ ಕೀರ್ತನೆಯೊಂದನ್ನು ಹಾಡ ತೊಡಗಿದಳು

ಅವಳ ಮುಖದಲ್ಲಿನ ವರ್ಚಸ್ಸಿಗಿಂತಲೂ ಅಧಿಕವಾಗಿ, ಅವಳ ಕಂಠವನ್ನು ಆಲೈಸಿ ಗಂಡಿನ ಕಡೆಯವರು ಸಂತೃಪ್ತರಾದರು ತಿಪ್ಪರಸ ತಾನು ಕೈಹಿಡಿಯುವ ಹುಡುಗಿಯ ರೂಪವನ್ನು ಪದೇ ಪದೇ ನೋಡಿ ತೃಪ್ತಿಗೊಂಡ ಇಂತಹ ಸುಲಕ್ಷಣವಂತೆಯ ಕೈಹಿಡಿಯುವ ಭಾಗ್ಯ ತನ್ನದಾದುದಕ್ಕೆ ದೇವರನ್ನು ಅವನು ಮನದಲ್ಲೇ ವಂದಿಸಿದನು ಗಿರಿಯಮ್ಮನಿಗಾದರೋ ಹೃದಯದಲ್ಲಿ ಯಾವ ಬಗೆಯ ಅತಿರೇಕದ ಬಾವನೆಗಳಿಗೂ ಅವಕಾಶವಿರಲಿಲ್ಲ ತನ್ನ ಚಿಕ್ಕಪ್ಪ ಚಿಕ್ಕಮ್ಮ ತನ್ನ ಮದುವೆಮಾಡುವ ಕರ್ತವ್ಯಪರಿಪಾಲನೆಯಲ್ಲಿ ತೊಡಗಿದ್ದಾರೆ ಅದಕ್ಕೆ ತಾನು ಸಿದ್ಧಳಿರಬೇಕು ನಿಜ ಆದರೆ ತಾನೂ ಎಲ್ಲರಂತೆ ಸಂಸಾರಮಾಡಿಕೊಂಡಿರಲು ಸಾಧ್ಯವೇ ಎಂಬುದೊಂದೇ ಅವಳ ಯೋಚನೆಯಾಗಿತ್ತು ಮನದಲ್ಲಿ ಮದುವೆಯ ಬಗ್ಗೆ ಆಕಾಂಕ್ಷೆ ಉತ್ಪನ್ನವಾಗದಿದ್ದರೂ ತನ್ನವರ ಹಾಗೂ ನೆರೆ ಹೊರೆಯವರ ಸಂತಸದಲ್ಲಿ ಗಿರಿಯಮ್ಮನೂ ಭಾಗಿಯಾದಳು

"ಪ್ರಭು, ವಿವಾಹಬಂಧನಕ್ಕೆ ನಾನು ಸಿಲುಕುವುದೇನೋ ನಿಜವೇ ಆದರೂ ನಿನ್ನ ಮೇಲಿನ ನನ್ನ ಭಕ್ತಿಗೆ ಯಾವ ಕಳಂಕವೂ ಒದಗದಿರಲಿ ಸ್ವಾಮಿ" ಎಂದು ಮನದಲ್ಲೇ ದೇವರಲ್ಲಿ ಮೊರೆಯಿಟ್ಟಳು

ಗಿರಿಯಮ್ಮ ತನ್ನನ್ನು ಕೈಹಿಡಿಯುವವನನ್ನು ಸರಿಯಾಗಿ ನೋಡಿದ್ದಳೋ ಇಲ್ಲವೋ, ತಿಪ್ಪರಸನು ಮಾತ್ರ ಹೆಂಡತಿಯ ಲಾವಣ್ಯವನ್ನು ಮನಸಾರೆ ನೋಡಿ ತಣಿದಿದ್ದ ಗಿರಿಯಮ್ಮನ ಲಾವಣ್ಯಕ್ಕಿಂತಲೂ ಅಧಿಕವಾಗಿ ಅವಳ ಸಾತ್ವಿಕ ಕಳೆ ಅವನನ್ನಾಕರ್ಷಿಸಿತು

ಗಿರಿಯಮ್ಮನನ್ನು ನೋಡಿ ತೃಪ್ತಿಗೊಂಡ ಗಂಡಿನಕಡೆಯವರು ತಮ್ಮ ಒಪ್ಪಿಗೆಯನ್ನು ಗಿರಿಯಮ್ಮನ ಚಿಕ್ಕಪ್ಪನವರಿಗೆ ತಿಳಿಸಿ ಮುಂದಿನ ಏರ್ಪಾಡು ಮಾಡುವಂತೆ ನುಡಿದರು

"ಹುಡುಗಿ ನಮ್ಮೆಲ್ಲರ ಮನಸ್ಸಿಗೆ ಒಪ್ಪಿಗೆ ತಾವು ಮುಂದಿನ ಏರ್ಪಾಡು ಮಾಡಿಕೊಳ್ಳಿ ಆದಷ್ಟು ಬೇಗ ಹುಡಿಗಿಯನ್ನು ಮನೆ ತುಂಬಿಸಿಕೊಳ್ಳುವ ಬಯಕೆ ನಮ್ಮದು"

ಗಿರಿಯಮ್ಮ ತನ್ನ ಕರ್ತವ್ಯ ಮುಗಿಯಿತೆಂಬಂತೆ ಮತ್ತೆ ಒಳಗೆ ನಡೆದು ಬಿಟ್ಟಳು ಮೈಮರೆತು ಕುಳಿತಿದ್ದ ತಿಪ್ಪರಸ ತಮ್ಮಾವರೊಡನೆ ಆ ಮನೆಯಿಂದ ಕದಲಬೇಕಾಗಿ ಬಂದಾಗ ಅವನಿಗೆ ನಿರಾಸೆಯೇ ಆಯಿತು

ಗಿರಿಯಮ್ಮನ ಚಿಕ್ಕಪ್ಪನವರಿಗಂತೂ ಗಂಡಿನವರು ಅವಳನ್ನು ಒಪ್ಪಿದರೆಂದು ಕೇಳಿದಮೇಲೆ ತಾವು ಕೃತಾರ್ಥರಾದೆವೆಂದು ಬಾವಿಸಿದರು

ಬಂದ ಅತಿಥಿಗಳಿಗೆ ಅವರು ತಾಂಬೂಲ ನೀಡಿದಾಗ ಕೃಷ್ಣಪ್ಪನವರು ಅದನ್ನು ತಿರಸ್ಕರಿಸಿದರು

"ನಮ್ಮ ನಿಮ್ಮ ಸಂಬಂಧ ಪಕ್ವವಾಗಬೇಕಾದರೆ ತಾಂಬೂಲ ತಗೋಬಾರ್ದು ಇಲ್ಲಿಗೇ ನಮ್ಮ ವ್ಯವಹಾರ ನಿಲ್ಲಿಸಬಿಡೋಣಾಂತಿರೇನು ?"

"ಛೇ ಹಾಗಂದ್ರೆ ಹೇಗೆ ? ತಾವು ದೊಡ್ಡಮನಸ್ಸು ಮಾಡಿ ನಮ್ಮ ಹುಡಗೀನ್ನ ಒಪ್ಪಿದ್ದೀರಿ ಅದೇ ನನ್ನ ಪುಣ್ಯ"

"ಚೆನ್ನಾನ್ನ ಒರೆಹಚ್ಚಿದ ಮೇಲೂ ಬೇಡ ಅನ್ನೋಕ್ಕಾಗುತ್ಯೇ" ಕೃಷ್ಣಪ್ಪನವರು ನಕ್ಕರು

ಮಲೆಬೆನ್ನೂರಿನ ಶ್ಯಾನುಭೋಗರಂತೆ, ಅವರ ಮಗ ತಿಪ್ಪರಸನೊಡನೆ ಗಿರಿಯಮ್ಮನ ವಿವಾಹ ನಿಶ್ಚಯವಾಯಿತಂತೆ ಎಂಬ ಮಾತು ಎಲ್ಲೆಡೆಗೂ ಹರಡಿತ್ತು ಗಿರಿಯಮ್ಮನ ಗೆಳತಿಯರು ಅವಳನ್ನು ಹಾಸ್ಯಮಾಡತೊಡಗಿದರು

"ಯಾವಾಗಲೂ ವೈರಾಗ್ಯ ವೈರಾಗ್ಯವೆಂದು ಹಾರಾಡುತ್ತಿದ್ದವಳಿಗೇನಾಯ್ತು ಸಂಸಾರ ಗಂಟುಬಿತ್ತು"

ಗಿರಿಯಮ್ಮ ಅವರ ಹಾಸ್ಯಕ್ಕೆ ಸ್ವಲ್ಪವೂ ವಿಚಲಿತಳಾಗದೆ ತನ್ನ ಪಾಲಿಗೆ ಶ್ರೀ ಕೃಷ್ಣಪರಮಾತ್ಮನ ಸೇವೆಮಾತ್ರ ಮೀಸಲು, ಬಾಕಿಯದೆಲ್ಲಾ ನಶ್ವರವೆಂದು ತಿಳಿದು ಮೌನವಹಿಸಿದ್ದಳು

ಮನೆಯಲ್ಲಿ ಮದುವೆಯ ಸಿದ್ಧತೆಗಳು ಬರದಿಂದ ಸಾಗಿದ್ದು ಗಿರಿಯಮ್ಮನೂ ಅದರಲ್ಲಿ ಪಾಲ್ಗೊಳ್ಳುವಂತಾಗುತ್ತಿತ್ತು ಗಿರಿಯಮ್ಮನನ್ನು ಸಾಕಿದ್ದ ಅವರ ಚಿಕ್ಕಪ್ಪ, ಚಿಕ್ಕಮ್ಮ ಅವಳ ಮದುವೆಯನ್ನು ಅದ್ದೂರಿಯಿಂದಲೇ ನಡೆಸಬೇಕೆಂದು ಸಂಕಲ್ಪಿಸಿದ್ದರು

ಮದುವೆಯ ದಿನಗಳು ಹತ್ತಿರವಾದವು ಮನೆಯಲ್ಲಿ ಅರಿಶಿನ ಕುಟ್ಟುವುದೂ, ಹಪ್ಪಳ ಸಂಡಿಗೆಗಳೂ ಸಿದ್ಧವಾದವು ನೆಂಟರಿಷ್ಟರೆಲ್ಲಾ ಬಂದು ಸೇರಿ ಮನೆ ತುಂಬಿದಾಗ ಗಿರಿಯಮ್ಮನಿಗೆ, ತನ್ನವರನ್ನೆಲ್ಲಾ ಬಿಟ್ಟು ಪರವೂರಿಗೆ ಹೊರಡುವ ಬಗ್ಗೆ ಯೋಚನೆಗಾರಂಭವಾಗಿತ್ತು ಅಷ್ಟೇ ಅಲ್ಲದೆ ಅತ್ತೆಯ ಮನೆಯಲ್ಲೂ ತನಗೆ ತವರಿನಂತೆಯೇ ಪೂಜೆ ಪುನಸ್ಕಾರ ನರ್ತನಗಳಿಗೆ ಸ್ವಾತಂತ್ರ್ಯ ದೊರಕುವುದೇ ಎಂಬ ಮತ್ತೊಂದು ಯೋಚನೆ ಅವಳನ್ನು ಬಾಧಿಸತೊಡಗಿತು

ಮದುವೆಯ ಹಿಂದಿನ ಸಂಜೆ ಗಂಡಿನವರು ತಮಗೆ ಏರ್ಪಡಿಸಿದ್ದ ಬಿಡಾರದಲ್ಲಿ ಬಂದು ತಂಗಿದರು ಗಂಡಿನವರನ್ನು ಸಕಲ ಮಂಗಳವಾದ್ಯಗಳೊಡನೆ ಬರಮಾಡಿಕೊಂಡರು ಹೆಣ್ಣಿನವರು ರಾತ್ರಿಯೇ ವರಪೂಜೆ, ಬಿಸಿಲೂಟ ಗಂಡಿನವರು ಯಾವ ರೀತಿಯ ಆಕ್ಷೇಪಣೆಯೂ ಮಾಡದಂತೆ ಸಕಲ ಸಿದ್ಧತೆಗಳೂ ತೃಪ್ತಿಕರವಾಗಿದ್ದವು ಗಿರಿಯಮ್ಮನನ್ನು ಗಂಡಿನವರ ಕಡೆಯವರಲ್ಲಿ ಅನೇಕರು ನೋಡಿರಲಿಲ್ಲ ಅವರೆಲ್ಲರೂ ಹೆಣ್ಣು ಕುಳಿತಿರುವ ಕೋಣೆಗೇ ಬಂದು ಸರ್ವಾಲಂಕಾರಭೂಷಿತಳಾದ ಗಿರಿಯಮ್ಮನನ್ನು ನೋಡಿ ಮುಗ್ಧರಾದರು ಹಲವರಾದರೆ ಅವಳ ರೂಪು ಲಾವಣ್ಯಕ್ಕೆ ಅಸೂಯಾಪರರಾದರು ಮತ್ತೆ ಹಲವರು ಅವಳ ಸಾತ್ವಿಕ ಕಳೆಗೆ ಗೌರವಭಾವ ತಳೆದರು ಮತ್ತೆ ಕೆಲವರು ಒಟ್ಟಿನಲ್ಲಿ ಗಿರಿಯಮ್ಮನ ಕೈಹಿಡಿಯುವ ತಿಪ್ಪರಸ ಪುಣ್ಯವಂತನೆಂದು ಅವರೆಲ್ಲರೂ ತೀರ್ಮಾನಿಸಿದರು

ಮನೆಯ ಹೊರಾಂಗಣದಲ್ಲೇ ಭಾರೀ ಚಪ್ಪರವೆಬ್ಬಿಸಿದ್ದರು ಗಿರಿಯಮ್ಮನ ಚಿಕ್ಕಪ್ಪ ತಳಿರು ತೋರಣಗಳಿಂದ ಅಲಂಕೃತವಾದ ಚಪ್ಪರದ ತುಂಬಾ ಜನ ತುಂಬಿದ್ದರು ಹೆಂಗೆಳೆಯರು ತೊಟ್ಟ ರೇಶಿಮೆಯ ಜರತಾರಿ ಸೀರೆಗಳ ಪರಪರಸದ್ದು, ಕೈ ಬಳೆಗಳ ನಾದ, ಅವರು ಮುಡಿದಿದ್ದ ಹೂಗಳ ಸುಗಂಧ ಚಪ್ಪರದ ತುಂಬಾ ಹರಡಿ ಶುಭಕಾರ್ಯದ ಪ್ರತಿನಿಧಿಗಳು ತಾವೇ ಎಂಬಂತೆ ಘೋಷಿಸಿದ್ದವು

ಎಣ್ಣೆ ಶಾಸ್ತ್ರದ ನಂತರ ಅಭ್ಯಂಜನ ಮಾಡಿಸಿ ಗಿರಿಯಮ್ಮನನ್ನು ಅಲಂಕರಿಸಿ ಗೌರೀಪೂಜೆಗಾಗಿ ಕೂಡಿಸಿದ್ದರು ಉಡಿತುಂಬಿ, ಅವಳಿಗೆ ತವರಿನ ತಾಳಿ ಕಟ್ಟಿ, ಐದು ಮಂದಿ ಮುತ್ತೈದೆಯರು ತಾಳಿಗೆ ಗಂಟು ಹಾಕಿದ್ದರು ಬೆಳ್ಳಿಯ ಪುಟ್ಟ ತಟ್ಟೆಯಲ್ಲಿ ಮಾಡಿಟ್ಟಿದ್ದ ಐದು ಅರಿಸಿನದ ಗೌರಿಗಳು, ಅದರ ಬದಿಗೇ ಇಟ್ಟಿದ್ದ ತುಳಸೀಕಟ್ಟೆ, ಹೂವು ಹಣ್ಣಿನ ತಟ್ಟೆಗಳು, ಬಣ್ಣದ ರಂಗೋಲಿಯ ಚಿತ್ರ ಸಕಲವೂ ಕಂಗೊಳಿಸುತ್ತಿತ್ತು

ಗಿರಿಯಮ್ಮ ಬಿಳಿಯ ಜರತಾರಿಯ ಪತ್ತಲದಲ್ಲಿ ಕಂಗೊಳಿಸುತ್ತಿದ್ದಳು ಅರಿಶಿನ ಲೇಪಿಸಿದ ಅವಳ ದೇಹಕಾಂತಿ ಹೊಸರೂಪ ತಳೆದಿತ್ತು ಕೈಗಳಿಗೆ ತೊಡಿಸಿದ್ದ ನಾಗಮುರಿಗಿ, ಜರತಾರಿಯ ಪತ್ತಲದ ಮೇಲೆ ಬಿಗಿದಿದ್ದ ಡಾಬು ಅವಳ ನಡುವನ್ನು ಮತ್ತೂ ಸಣ್ಣದಾಗಿಸಿತ್ತು

ಎರಡು ಕೈಗಳ ತುಂಬಾ ತೊಟ್ಟಿದ್ದ ಹಸಿರು ಬಳೆಗಳು ಅವಳು ಪೂಜೆ ಮಾಡುವಾಗ ಕಿಣಿ ಕಿಣಿ ನಾದ ಮಾಡುತ್ತಿದ್ದವು ಬಾಸಿಂಗಧಾರಿಯಾಗಿ ಕುಳಿತು ಗೌರಿಪೂಜೆ ಮಾಡುತ್ತಿದ್ದ ಮದುವಣಗಿತ್ತಿಯನ್ನು ನೋಡಲು ಎಲ್ಲರಿಗೂ ಸಂಭ್ರಮ

"ಗಿರಿಯಮ್ಮ ಮೂಕಪೂಜೆ ಕೂಡದು ಹಾಡು ಹೇಳಿಕೊಂಡು ತುಂಬು ಮನಸ್ಸಿನಿಂದ ಪೂಜೆ ಮಾಡಮ್ಮಾ"

ಅಲ್ಲೇ ಬಂದವರಿಗೆ ಚಾಪೆ ಹಾಸುತ್ತಿದ್ದ ಅವಳ ಚಿಕ್ಕಮ್ಮನೆಂದರು ಗಿರಿಯಮ್ಮ ಯಾವ ಸಂಕೋಚವೂ ಇಲ್ಲದೆ ಹಾಡುತ್ತಾ ಪೂಜೆ ಮಾಡತೊಡಗಿದಳು

ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೋ
ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು || ೧ ||

ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಪೂರ್ಣಗುಣಗಳು ಶ್ರೇಷ್ಠವಾಗಿ ಮಾಡುತಿಹಳು || ೧ ||

ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು
ಚಿತ್ರ ಚರಿತನಾದ ಹರಿಯ ನಿತ್ಯ ಸೇವೆ ಮಾಡುತಿಹಳು || ೨ ||

ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷರಹಿತನಾದ
ಗರುಡಗಮನನಾದ ಪುರಂದರ ವಿಠಲನ್ನ ಸೇವಿಸುವಳು || ೪ ||

ಅವಳ ಹಾಡನ್ನು ಆಲೈಸುವುದಕ್ಕಾಗಿಯೇ ಅಲ್ಲಿಗೆ ಎಲ್ಲಾ ಹೆಂಗೆಳೆಯರು ಬಂದು ಸೇರಿದರು

ಇತ್ತ ಹಸೆಮಣೆಯ ಮೇಲೆ ಕುಳಿತಿದ್ದ ತಿಪ್ಪರಸ ಯಾಂತ್ರಿಕವಾಗಿ ಪುರೋಹಿತರು ಹೇಳಿಕೊಡುತ್ತಿದ್ದ ಮಂತ್ರವನ್ನು ಉಚ್ಚರಿಸುತ್ತಾ ತಾನು ಗಿರಿಯಮ್ಮನೊಡನೆ ಕಳೆಯುವ ಮುಂದಿನ ರಸನಿಮಿಷಗಳನ್ನೇ ಮನದಲ್ಲಿ ಮಂಡಿಗೆ ಹಾಕುತ್ತಲಿದ್ದ

ಧಾರೆಯ ಮಂಟಪದಲ್ಲಿ ಕುಳಿತ ಆಹ್ವಾನಿತರು ಗಿರಿಯಮ್ಮನ ಆಗಮನವನ್ನೇ ನಿರೀಕ್ಷಿಸುತ್ತಿದ್ದರು

ಅಂತರಪಟವನ್ನ ಹಿಡಿದು ಪುರೋಹಿತರು ಕನ್ಯೆಯನ್ನು ಕರೆದುತರುವಂತೆ ನುಡಿದಾಗ ಗಿರಿಯಮ್ಮನ ಚಿಕ್ಕಪ್ಪ ಅಲ್ಲೇ ನಿಂತಿದ್ದ ಗಿರಿಯಮ್ಮನ ಸೋದರ ಮಾವನಿಗೆಂದರು

"ಗಿರಿಯಮ್ಮನನ್ನು ಕರ್‍ಕೊಂಡು ಬಾ "

ಸೋದರಮಾವನಿಂದ ಹಸೆಮಣೆಗೆ ಕರೆದುತರಲ್ಪಟ್ಟ ಗಿರಿಯಮ್ಮ ಬಲಗಾಲನಿಟ್ಟು ಹಸೆಮಣೆಯನ್ನೇರಿದಳು

ಯಾವುದೋ ಅದೃಶ್ಯ ಶಕ್ತಿ ಆಡಿಸುತ್ತಿರುವ ಈ ನಾಟಕದಲ್ಲಿ ತಾನೊಬ್ಬ ಪಾತ್ರಧಾರಿ ಎಂದನುಭವವಾಗಿತ್ತವಳಿಗೆ ತನ್ನ ನಿತ್ಯಜೀವನದ ನಡುವಳಿಕೆಗಳಲ್ಲಿ ನಡೆಯುವ ಸಾಮಾನ್ಯ ಘಟನೆಗಳಲ್ಲಿ ಇದೂ ಒಂದು ಎಂದು ಅವಳ ಅಂತರಾತ್ಮ ನುಡಿಯುತ್ತಿತ್ತೇ ವಿನಃ ಇದೊಂದೇ ಮಹತ್ವಪೂರ್ಣ ಘಟನೆ ಎಂದೆನ್ನಿಸಿರಲಿಲ್ಲ

ಗಂಡಿನತ್ತ ಬೀರುವ ಓರೆನೋಟವಾಗಲೀ, ಲಜ್ಜೆಯಾಗಲೀ ಅವಳನ್ನಾವರಿಸಿರಲಿಲ್ಲ ಎಲ್ಲರಂತೆ ತಾನೂ ಈ ಕಾರ್ಯಕ್ರಮದಲ್ಲಿ ಅನ್ಯಳು ಎಂದು ಮನದಲ್ಲೇ ಭೋರ್ಗರೆಯುತ್ತಿದ್ದ ಭಗವಂತನ ಸಂದೇಶ ಅವಳಲ್ಲಿ ನೆಲೆಸಿತ್ತು

"ಮೊದಲೇ ಜೀರಿಗೆ ಬೆಲ್ಲ ಹಾಕು ಇಲ್ಲಾಂದ್ರೆ ಗಂಡನ ಮಾತೇ ಕೇಳಬೇಕಾಗುತ್ತೆ "

ಗಿರಿಯಮ್ಮನ ಮಗ್ಗುಲಿಗೆ ನಿಂತ ಅವಳ ಓರಿಗೆಯವಳು, ಜೀರಿಗೆ ಬೆಲ್ಲ ಹಿಡಿದು ನಿಂತ ಅವಳನ್ನು ಎಚ್ಚರಿಸಿದಳು ಗಿರಿಯಮ್ಮ ನಿರ್ಲಿಪ್ತ ಭಾವದಿಂದ ನಕ್ಕಳು ಮನದೊಳಗೇ

"ಯಾರು ಗಂಡ ಯಾರು ಹೆಂಡತಿ ಇದೇನೀ ಬಂಧನ'' ಎಂದವಳಿಗೆ ಸಮಸ್ಯೆಯಾಯಿತು

ಜೀರಿಗೆ ಬೆಲ್ಲದ ಶಾಸ್ತ್ರವಾದ ನಂತರ, ವಧೂವರರ ಮುಖ ಸಂದರ್ಶನ ಮಾಡಿಸಿದರು ಪುರೋಹಿತರು

ತಿಪ್ಪರಸ ಎದುರಿಗೇ ಭೂಷಿತಳಾಗಿ ನಿಂತ ಭಾವೀ ಮಡದಿಯನ್ನು ಕಣ್ಣು ತುಂಬಾ ನೋಡಿದ

ಹಸೆಮಣೆಯ ಮೇಲೆ ಅವನ ಮಗ್ಗುಲಿಗೆ ಕುಳಿತ ಗಿರಿಯಮ್ಮನಿಗೆ ತಾನು ಇಂದಿನಿಂದ ಅನ್ಯರ ವಸ್ತು ತವರಿನ ತನ್ನ ಋಣಾನುಬಂಧ ಕಡಿಯಿತು ಎಂದೆನಿಸಾಗತೊಡಗಿತು ತನ್ನನ್ನು ಸಾಕಿದ ಚಿಕ್ಕಪ್ಪ, ಚಿಕ್ಕಮ್ಮನನ್ನು ಅಗಲುವುದಿರಲಿ, ತಾನು ಅನ್ಯರ ಸ್ವತ್ತಾಗುವುದು ಅವಳಿಗೆ ಬೇಕಿರಲಿಲ್ಲ ಆದರೆ ಅದನ್ನು ಅವಳಾಗಿ ಪ್ರತಿಭಟಿಸುವಂತೆಯೂ ಇರಲಿಲ್ಲ ತಿಪ್ಪರಸ ಗಿರಿಯಮ್ಮನ ಕೊರಳಿಗೆ ನೆರೆದಿದ್ದ ಸಕಲ ಹಿರಿಯರ ಸಮ್ಮುಖದಲ್ಲಿ ಮಾಂಗಲ್ಯಧಾರಣೆ ಮಾಡಿದರೆ, ಅಪರೋಕ್ಷವಾಗಿ ಅಲ್ಲಿ ನೆರೆದಿದ್ದಂತಹ ದೇವತೆಗಳು ಗಿರಿಯಮ್ಮನಿಗೆ ವೇದೋಕ್ತ ಆಶೀರ್ವಾದ ಮಾಡಿದರು

ಪುರೋಹಿತರ ಮಂತ್ರೋಚ್ಚಾರಣೆ, ಮೊಳಗುತ್ತಿದ್ದ ವಾದ್ಯಗಳೊಂದರ ಅರಿವೆಯೂ ಇಲ್ಲದೆ ಗಿರಿಯಮ್ಮ ಪ್ರತಿಮೆಯಂತೆ ಕುಳಿತಿದ್ದಳು ಯಾವುದೋ ವೇದನೆ ಅವಳ ಹೃದಯವನ್ನು ಭೇದಿಸಿದಂತಾದಾಗ, ಅಭಯ ಹಸ್ತವೊಂದು ಅವಳಿಗೆ ಗೋಚರವಾದಂತಾಯ್ತು

"ಗಿರಿಯಮ್ಮ ನಿನ್ನ ಉಜ್ವಲವಾದ ಬವಿಷ್ಯದ ಬದುಕಿಗೆ ಇದು ನಾಂದಿಯೇ ಹೊರತೂ ಮತ್ತೇನೂ ಅಲ್ಲ ಧೈರ್ಯವಾಗಿರು'' ಎಂಬ ಅಶರೀರವಾಣಿ ಅವಳ ಕಿವಿ ಮುಟ್ಟಿತು ಅನಂತರದ ಕಾರ್ಯಕ್ರಮಗಳಿಗೆಲ್ಲಾ ಗಿರಿಯಮ್ಮನೂ ಚಟುವಟಿಕೆಯಿಂದ ವರ್ತಿಸಿದಳು

ನಾಗೋಲಿ, ಉರುಟಣೆ ಮುಂತಾದ ಕಾರ್ಯಕ್ರಮಗಳಲ್ಲಿ ಹೆಣ್ಣಿನ ನಾಚಿಕೆ, ಸಂಕೋಚ ಬೆರೆತ ನೋಟವನ್ನು ನಿರೀಕ್ಷಿಸಿದ್ದ ಹೆಂಗಳೆಯರಿಗೆ ನಿರಾಸೆಯೇ

ಆಯಿತು ಗಿರಿಯಮ್ಮ ಸಂಕೋಚವಿಲ್ಲದೆ, ಉರುಟಣೆ ಹಾಡು ಹಾಡಿ ಮುಗಿಸಿದಳು ಬಾಗಿಲು ಕಟ್ಟಿದಾಗ ತಟ್ಟನೆ ಗಂಡನ ಹೆಸರು ಹೇಳಿದಳು "ಮದುವೆ ಹೆಣ್ಣು ಅಂದರೆ ಲಜ್ಜೆ ಬೇಡವೇ ?'' ಗಿರಿಯಮ್ಮನನ್ನು ಆಟ ಆಡಿಸಬೇಕೆಂದಿದ್ದ ಹೆಂಗೆಳೆಯರಿಗೆ ನಿರಾಸೆಯುಂಟಾಗಿ ಅವರು ಉದ್ಗಾರವೆಳೆದರು ಆದರೆ ಆ ಉದ್ಗಾರ ಮೂಲೆಪಾಲಾಯ್ತು

ಮದುವೆಗಾಗಿ ಬಂದಿದ್ದ ಗಂಡಿನವರ ಬಾಯಿಂದ ಮಲೆಬೆನ್ನೂರಿಗೆ ಸಮೀಪದಲ್ಲಿರುವ ಕೊಮಾರನ ಹಳ್ಳಿಯಲ್ಲಿ ನೆಲೆಸಿ ಬಹು ಪ್ರಖ್ಯಾತವಾಗಿರುವ ಹೆಳವನಕಟ್ಟೆ ರಂಗನಾಥಸ್ವಾಮಿಯನ್ನು ಗಿರಿಯಮ್ಮನಿಗೆ ಕಣ್ತುಂಬಾ ನೋಡುವ ಮನಸ್ಸಾಗಿದೆ ಬಾಲ್ಯದಲ್ಲಿ ಒಮ್ಮೆ ಶ್ರೀರಂಗನಾಥನನ್ನು ನೋಡಿದ ನೆನಪು ಅವಳಲ್ಲಿ ಮಾಸಿತ್ತು ಆದರೆ ಅವಳು ಕೂಡಲೇ ಹೋಗಿ ತನ್ನ ಅಬಿಲಾಷೆಯನ್ನು ಚಿಕ್ಕಮ್ಮನಿಗೆ ತಿಳಿಸಿದಾಗ ಅವರು ಅದಕ್ಕೆ ಬೇರೊಂದರ್ಥವನ್ನು ಕಲ್ಪಿಸಿ ಅವಳಿಗೆ ಸಮಾಧಾನ ನೀಡಿದರು

"ಕೊಟ್ಟ ಹೆಣ್ಣು ಎಂದಿಗಿದ್ದರೂ ಕುಲಕ್ಕೆ ಹೊರಗು ಎಂಬಂತೆ, ಗಿರಿಯಮ್ಮ ನೀನು ಮಲೆಬೆನ್ನೂರಿಗೆ ಹೊರಡುವವಳೇ ಆದರೆ ಅದಕ್ಕೆ ನೀನು ಇನ್ನೂ ಸ್ವಲ್ಪ ಕಾಲ ಕಾಯಬೇಕು ''

ಗಿರಿಯಮ್ಮನಿಗೆ ಚಿಕ್ಕಮ್ಮನ ಮಾತಿನಿಂದ ನಿರಾಸೆಯೇ ಆಯಿತು ತಿಪ್ಪರಸನ ಅಪೇಕ್ಷೆಯೂ ಗಿರಿಯಮ್ಮನನ್ನು ತಮ್ಮ ಜತೆಗೆ ಕರೆದೊಯ್ಯುವುದಾಗಿತ್ತು ಆದರೆ ಗಿರಿಯಮ್ಮ ಋತುಮತಿಯಾಗದ ಹೊರತೂ ಗಂಡನ ಮನೆಗೆ ಹೋಗುವಂತಿಲ್ಲ

ತಿಪ್ಪರಸನೂ ನಿರಾಶೆಯಿಂದ ಕೂಡಿದ ಏಕಾಂಗಿಯಾಗಿ ಹೆಂಡತಿಯೊಡನೆ ಮಾತನಾಡುವ ಒಂದು ಅವಕಾಶವೂ ಅವನಿಗೆ ಒದಗಿಬಂದಿರಲಿಲ್ಲ ಮದುವೆ ಮುಗಿಸಿಕೊಂಡು ನಿಂತ ಗಂಡಿನವರ ಪೈಕಿ ಹಿರಿಯರಿಗೆಲ್ಲಾ ಗಿರಿಯಮ್ಮ ನಮಸ್ಕಾರ ಮಾಡಿದಳು

ಅವಳು ಕೃಷ್ಣಪ್ಪನವರಿಗೆ ನಮಸ್ಕಾರಮಾಡಲು ಅವರ ಬಳಿ ಬಂದಾಗ ಅವರು ಅವಳ ತಲೆಯ ಮೇಲೆ ಕೈಯಿಟ್ಟು ನುಡಿದರು, "ಆದಷ್ಟು ಬೇಗ ನಮ್ಮ ಮನೆಯ ಬೆಳಕಾಗಿ ಬಂದು ಮನೆತುಂಬು ತಾಯಿ ''

ಅವರ ಮಗ್ಗುಲಿಗೇ ತಿಪ್ಪರಸ ನಿಂತಿದ್ದ ಗಿರಿಯಮ್ಮ ಅವನ ಕಾಲಿಗೂ ಬಾಗಿ ನಮಸ್ಕರಿಸಿದಾಗ ಅವನು ಏನೂ ಮಾತನಾಡಲರಿಯದೆ ಮೌನವಾಗೇ ಅವಳ ಮುಖ ವೀಕ್ಷಿಸಿದ ಹೆಂಡತಿಯ ಸಾನಿಧ್ಯದಿಂದ ದೂರವಾಗಬೇಕಾಯಿತಲ್ಲಾ, ಮತ್ತೆ ಅವಳ ದರ್ಶನ ಎಂದೋ ಎಂದವನ ಹಂಬಲ ಗಿರಿಯಮ್ಮ ಅವನಿಗೂ ನಮಸ್ಕರಿಸಿ ಅಲ್ಲಿಂದ ಕದಲಿದಳು ಗಂಡನೊಡನೆ ಏಕಾಂತವನ್ನು ಅವಳ ಆತ್ಮ ಬಯಸದ ಕಾರಣ ಅವಳ ವರ್ತನೆ ಅಸಹಜವಾಗೇ ಇತ್ತು ಗಿರಿಯಮ್ಮ ಹೋದದಿಕ್ಕನ್ನೇ ನೋಡುತ್ತಾ ಪೆಚ್ಚಾಗಿ ನಿಂತ ತಿಪ್ಪರಸ

ಕೃಷ್ಣಪ್ಪನವರು ಮಗನನ್ನು ಎಚ್ಚರಿಸಿದರು,

"ತಿಪ್ಪ ನಡಿ ಇನ್ನು ಹೊತ್ತಾದೀತು ಎಂದಿಗಿದ್ದರೂ ಗಿರಿಯಮ್ಮ ನಮ್ಮ ಮನೆಗೆ ಬರುವವಳು ತಾನೇ "

ತಿಪ್ಪರಸ ಒಲ್ಲದ ಮನಸ್ಸಿನಿಂದ ಗಾಡಿಯನ್ನೇರಿ ಕುಳಿತ ಗಿರಿಯಮ್ಮನ ವದನಾರವಿಂದ ಮತ್ತೆ ಕಾಣಬರುವುದೇನೋ ಎಂದವನು ಒಂದೆರಡು ನಿಮಿಷ ಗಾಡಿಯೊಳಗಿನಿಂದಲೇ ಹಣಕಿದ ಗಾಡಿಗೆ ಕಟ್ಟಿದ ಎತ್ತಿನ ಕೊರಳಿನ ಗೆಜ್ಜೆ ಅವನ ಮಧುರ ಭಾವನೆಗಳಿಗೆ ಪುಟಗೊಟ್ಟವು

*          *          *          *

ಗಿರಿಯಮ್ಮನ ಸಂಗಡಿಗರಲ್ಲಿ ಒಂದಿಬ್ಬರಿಗೆ ಅವಳಿಗಿಂತಲೂ ಮೊದಲೇ ವಿವಾಹವಾಗಿದ್ದಿತು ತವರಿಗೆ ಬಂದಿದ್ದ ಅವರು ತಮ್ಮ ವಿವಾಹದ ಜೀವನದ ಸವಿ ಘಟನೆಗಳನ್ನು ಗೆಳತಿಯರೆಲ್ಲರೂ ಸೇರಿದಾಗ ವಿವರಿಸಿದರೆ ಗಿರಿಯಮ್ಮ ತನಗೆ ಆ ವಿಷಯವೇ ಸಂಬಂಧವಿಲ್ಲದಂತೆ ಕುಳಿತಿರುತ್ತಿದ್ದಳು ಅವಳು ಅವರ ಬಳಿ ಮಾತನಾಡುತ್ತಿದ್ದ ವಿಷಯವೆಲ್ಲಾ ಭಗವಂತನಿಗೆ ಸಂಬಂಧಿಸುತ್ತಿದ್ದ ವಿಷಯಗಳೇ, ಇಲ್ಲವೇ ಹಾಡು, ಹಸೆಗಳ ವಿಷಯ ರಂಗೋಲಿಯಲ್ಲಿ ಪರಮಾತ್ಮನ ನಾನಾ ಸ್ವರೂಪಗಳನ್ನು ಚಿತ್ರಿಸುವ ಕಲೆಯ ಬಗ್ಗೆ ಇತ್ಯಾದಿ ವಿಷಯಗಳಲ್ಲದೆ ಅವಳು ಅನ್ಯ ವಿಷಯಗಳನ್ನೇ ಚರ್ಚಿಸುತ್ತಿರಲಿಲ್ಲ

ಅಂದು ದ್ವಾದಶಿ ಗಿರಿಯಮ್ಮ ಎಂದಿಗಿಂತಲೂ ಮುಂಚಿತವಾಗಿ ಎದ್ದು

ಮೈತೊಳೆದು ಪೂಜೆಗೆ ಸಿದ್ಧತೆ ನಡೆಸಿರುವಾಗ ಅವಳ ಚಿಕ್ಕಮ್ಮ ಅವಳನ್ನು ಕೂಗಿ ಒಂದು ಎಲೆಯಲ್ಲಿ ಅಕ್ಕಿ ಬೆಲ್ಲವನ್ನಿಟ್ಟು ಮನೆಯ ಕೊಟ್ಟಿಗೆಯಲ್ಲಿದ್ದ ಹಸುವಿಗಿಡು ಎಂದಾಗ ಅವಳು ಅದನ್ನೆತ್ತಿಕೊಂಡು ಹಸುವಿನ ಬಳಿಗೆ ಬಂದು ನಿಂತಳು ಇನ್ನು ಮುಂದೆ ಇದರ ಸೇವೆ ತನಗೆ ತಪ್ಪುವುದು ಎಂಬ ಯೋಚನೆ ಅವಳ ಮನದಲ್ಲಿದ್ದಾಗ ಅವಳು ದುಃಖದಿಂದ ಅದರ ಮುಂದೆ ಅಕ್ಕಿ ಬೆಲ್ಲದ ಎಲೆಯನ್ನಿಟ್ಟು ಅದರ ಬೆನ್ನು ಸವರಿದಳು

ಹಸು ಅಕ್ಕಿ ಬೆಲ್ಲವನ್ನು ತಿಂದನಂತರ ಅವಳು ಬಹಳ ಹೊತ್ತು ಅದರ ಬಳಿಯೇ ನಿಂತು ಏನನ್ನೋ ಆಲೋಚಿಸುತ್ತಿದ್ದಳು

"ಗಿರಿಯಮ್ಮ, ನಿನ್ನ ಪೂಜೆಯಾಯಿತೇ ?" ಚಿಕ್ಕಮ್ಮ ಕೂಗಿದಾಗಲೇ ಅವಳಿಗೆಚ್ಚರ ಅವಳು ತನ್ನ ಮುಂದಿನ ಕೆಲಸಕಾರ್ಯಗಳಿಗಾಗಿ ಅಲ್ಲಿಂದ ಕದಲಿದಳು

ಒಂದು ಪ್ರಶಸ್ತವಾದ ದಿನ ಗಿರಿಯಮ್ಮ ಋತುಮತಿಯಾದಳು ಅವಳನ್ನು ಕೂಡಿಸಿ ಅವಳ ಚಿಕ್ಕಮ್ಮ ಹೆಂಗೆಳೆಯರೊಡಗೂಡಿ ಆರತಿ ಶಾಸ್ತ್ರ ಮಾಡಿದಾಗ ಗಿರಿಯಮ್ಮನಿಗನ್ನಿಸಿತು ಇನ್ನು ತಾನು ಅತ್ತೆಯಮನೆಗೆ ಹೋಗಲು ತಡವಿಲ್ಲ ಎಂದು ಮಲೆಬೆನ್ನೂರಿಗೆ ಹೋಗಿ ರಂಗನಾಥಸ್ವಾಮಿಯನ್ನು ನೋಡುವ ಅವಕಾಶ ಒದಗಿ ಬಂತಲ್ಲಾ ಎಂಬ ಸಂತಸ ಒಂದು ಕಡೆಯಾದರೆ ಮತ್ತೊಂದುಕಡೆ ತಮ್ಮವರನ್ನೆಲ್ಲಾ ತೊರೆದು ಹೋಗಬೇಕಲ್ಲಾ ಎಂಬ ದುಃಖ ಅವಳನ್ನಾವರಿಸಿದೆ ಆದರೆ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬಂತೆ ಇನ್ನು ಮುಂದೆ ತನಗೆ ಅತ್ತೆಯ ಮನೆಯೇ ಸೌಭಾಗ್ಯವೆಂದರಿವಾಗಿದೆ ಅವಳಿಗೆ

ಗಿರಿಯಮ್ಮ ಋತುಮತಿಯಾದ ವಿಷಯವನ್ನು ಮಲೆಬೆನ್ನೂರಿಗೆ ತಿಳಿಸಿದರು ಅವಳ ಹಿರಿಯರು ತಿಪ್ಪರಸನಿಗೆ ಸ್ವರ್ಗವೇ ಕೈಗೆ ಸಿಲುಕಿದಷ್ಟು ಸಂತಸವಾಗಿತ್ತು ಹೆಂಡತಿಯೊಡನೆ ತನ್ನ ಮುಂದಿನ ಭವಿಷ್ಯದ ಸವಿದಿನಗಳನ್ನು ಕಳೆಯುವ ವಿಧಾನವನ್ನೇ ಕನಸುಕಾಣತೊಡಗಿದ ಅವನು

ಆದಷ್ಟು ಬೇಗ ದಿನವನ್ನು ಗೊತ್ತುಮಾಡಿ ಸೊಸೆಯನ್ನು ತಾವು ಮನೆ ತುಂಬಿಸಿಕೊಳ್ಳಲು ಇಚ್ಛೆಪಡುವುದಾಗಿ ಕೃಷ್ಣಪ್ಪನವರು ಉತ್ತರಿಸಿದರು

ಗಿರಿಯಮ್ಮ ಅತ್ತೆಮನೆಗೆ ತೆರಳುವ ದಿನ ಗೊತ್ತಾಯಿತು ಅವಳ ಸಂಗಡಿಗರಿಗೂ ಅವಳು ತಮ್ಮಿಂದ ದೂರವಾಗುವಳಲ್ಲಾ ಎಂಬ ದುಃಖ ಆವರಿಸಿತ್ತು ನಾಟಕದಲ್ಲಿ ವಧುವಿನ ಪಾತ್ರವಹಿಸಿದ ನಂತರ ನಾಟಕದ ಮುಂದಿನ ದೃಶ್ಯಗಳಲ್ಲೂ ತಾನು ಬಾಗವಹಿಸಲೇಬೇಕು ದೇವರ ಚಿತ್ತದಲ್ಲಿ ಹೇಗಿದೆಯೋ ಏನೋ ಎಂದಿತವಳ ಮನ ದಾಸರು ತನಗಿತ್ತಿದ್ದ ಕೃಷ್ಣನ ವಿಗ್ರಹವನ್ನು ಆಸಕ್ತಿಯಿಂದ ಅಲಂಕರಿಸಿ ಅವಳು ತನ್ನ ಪೆಟ್ಟಿಗೆಗೆ ಹಾಕಿದಾಗ ಅವಳ ಚಿಕ್ಕಮ್ಮ ಹಾಸ್ಯಮಾಡಿದರು

"ಅತ್ತೆಮನೆಗೂ ನಿನ್ನ ಕೃಷ್ಣನ್ನ ಕರ್‍ಕೊಂಡು ಹೋಗ್ತೀಯೇನು ಗಿರಿಯಮ್ಮ?"

"ಚಿಕ್ಕಮ್ಮ ನಾನು ಎಲ್ಲೇ ಇದ್ರೂ ಕೃಷ್ಣ ನನ್ನ ಬಳಿ ಇದ್ದರೇ ನಂಗೆ ಸಮಾಧಾನ" ಗಿರಿಯಮ್ಮ ಉತ್ತರಿಸಿದಳು ಗಂಬೀರವಾಗಿ

ಅವಳು ಅತ್ತೆಯ ಮನೆಗೆ ಹೋಗುವ ಮುಂಚೆ ಅಕ್ಕಪಕ್ಕದವರಿಗೆಲ್ಲಾ ಹೇಳಿಬರಲು ಹೊರಟಾಗ ಅವರೆಲ್ಲರೂ ಅವಳ ಉಡಿತುಂಬಿ ಆಶೀರ್ವದಿಸಿದರು ಗಿರಿಯಮ್ಮ ಎಲ್ಲರಿಂದಲೂ ಆಶೀರ್ವಾದ ಪಡೆದು ಮನೆಗೆ ಬಂದಾಗ ಮನೆಯ ಮುಂದೆ ಪ್ರಯಾಣಕ್ಕೆ ಗಾಡಿ ಸಿದ್ಧವಾಗಿತ್ತು ಅವಳ ಚಿಕ್ಕಪ್ಪ ಚಿಕ್ಕಮ್ಮ ಅವರ ಆತ್ಮೀಯ ನೆಂಟರಿಷ್ಟರು, ಮಲೆಬೆನ್ನೂರಿಗೆ ಹೋಗಿಬರುವುದೆಂದು ನಿಶ್ಚಯವಾಗಿತ್ತು

ಗಿರಿಯಮ್ಮನ ಚಿಕ್ಕಪ್ಪನಿಗೆ ಅವಳನ್ನು ಬಿಟ್ಟಿರುವುದು ಸಹಿಸಲಸಾಧ್ಯವಾದ ನೋವು ಅವರ ಪೂಜೆಗೆ ಹೂವು ಹಣ್ಣು ತಂದಿಡುವುದು, ದೇವರ ಪಾತ್ರೆ ತೊಳೆದಿಡುವುದು, ಅವರ ಬಟ್ಟೆ ಬರೆ ಒಗೆಯುವುದು, ಅವರ ಸಕಲ ಕೆಲಸಗಳಿಗೂ ಅವಳೇ ಮುಂದಿರುತ್ತಿದ್ದಳು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಿಂತಲೂ ಅಧಿಕವಾದ ಮಮತೆ ಅವರಿಗೆ ಅವಳಲ್ಲಿ ಸಂಜೆಯ ಹೊತ್ತು ದೇವಸ್ಥಾನಕ್ಕೋ ಇಲ್ಲವೇ ಹರಿಕಥೆಗೋ, ಪುರಾಣ ಪುಣ್ಯಕಥೆಗೋ ಅವರು ಹೊರಟರೆ ಅವಳೂ ಅವರ ಜತೆಗೆ ಹೊರಡುತ್ತಿದ್ದಳು ಇನ್ನು ಗಿರಿಯಮ್ಮ ಅತ್ತೆಯ ಮನೆಗೆ ಹೊರಟರೆ ಮುಂದೇನು ? ಎಂಬ ಸ್ವಾರ್ಥಕ್ಕಿಂತಲೂ ಅವಳ ಮೇಲಿನ ಅಧಿಕವಾದ ಮಮತೆಯಿಂದ ಅವರು ಅವಳನ್ನಗಲಲು ಪರಿತಪಿಸಿದರು

ಗಿರಿಯಮ್ಮನನ್ನು ಮಣೆಯ ಮೇಲೆ ಕೂಡಿಸಿ ಅವಳಿಗೆ ಅರಿಸಿನ ಕುಂಕುಮವಿತ್ತು

ಅವಳ ಉಡಿ ತುಂಬಿದರು ಹಿರಿಯರು ಗಿರಿಯಮ್ಮ ದೇವರ ಕೋಣೆಗೆ ಹೋಗಿ ನಮಸ್ಕರಿಸಿ ಮನದಲ್ಲೇ ದೇವರಲ್ಲಿ ಮೊರೆಯಿಟ್ಟಳು,

"ದೇವ ಎಲ್ಲವೂ ನಿನ್ನದೇ, ನೀನು ಆಡಿಸಿದಂತೆ ಆಡುವ ಸೂತ್ರದ ಗೊಂಬೆಗಳು ನಾವು ನಿನ್ನ ಸೇವೆಯನ್ನು ಅನುಗಾಲವೂ ಮಾಡುವ ಸೌಭಾಗ್ಯ ನನ್ನದಾಗಲಿ ತಂದೆ"

ಗಾಡಿಯಲ್ಲಿ ಕುಳಿತುಕೊಂಡಾಗ ಅವಳಿಗೆ ಮನೆಯ ಮುಂದೆ ಹುಲ್ಲುಮೇಯುತ್ತಿದ್ದ ಅವರ ಮನೆಯ ಕರು ಅಂಬಾ ಎಂದು ಅವಳ ಗಾಡಿಯಬಳಿಯೇ ಓಡಿಬಂದಿದೆ ಗಿರಿಯಮ್ಮ ಗಾಡಿಯಿಂದ ಧುಮುಕಿ ಅದರ ತಲೆ ಸವರಿದವಳೇ ಕಣ್ಣೀರು ತುಂಬಿದವಳಾಗಿದ್ದಾಳೆ ಕರುವನ್ನು ಆಳುಮಗ ಎಳೆದುಕೊಂಡಾಗ ಅವಳು ಎದೆಬಿರಿಯುವ ದುಃಖವನ್ನು ಹತ್ತಿಕ್ಕಿಕೊಂಡು ಮತ್ತೆ ಗಾಡಿ ಏರಿದಾಗ ಗಾಡಿ ಮುಂದೆ ಮುಂದೆ ಸಾಗತೊಡಗಿತು ಗಾಡಿಯನ್ನೇ ಹತ್ತಾರು ಹೆಜ್ಜೆ ಹಿಂಬಾಲಿಸಿ ಹೋದ ಜನರು ಕ್ರಮೇಣ ನಿರಾಸೆಯಿಂದ ನಿಂತಾಗ, ಗಿರಿಯಮ್ಮನ ದುಃಖದ ಕಟ್ಟೆಯೊಡೆದು ಅವಳು ಸೆರಗಿನಲ್ಲಿ ಮುಖ ಹುದುಗಿಸಿದಳು

ಸೊಸೆಯನ್ನು ಮನೆತುಂಬಿಸಿಕೊಳ್ಳುವ ಸಡಗರ ಕೃಷ್ಣಪ್ಪನವರ ಮನೆಯವರಿಗೆ ಮಲೆಬೆನ್ನೂರಿನ ಶ್ಯಾನುಬೋಗರು ಸಕಲರಿಗೂ ಬೇಕಾದವರು

ಹಳೆಯ ಕಾಲದ ತೊಟ್ಟಿಮನೆ ಮನೆಯ ಮುಂದೆ ಭಾರೀ ಚಪ್ಪರ ಮನೆಯ ತುಂಬಾ ಜನ ಸೇರಿದ್ದರು ಮನೆಯ ಮುಂದೆ ಗಾಡಿ ನಿಂತೊಡನೆಯೇ ಕೃಷ್ಣಪ್ಪನವರ ಮನೆಯವರು ಗಾಡಿಯ ಮುಂದೆ ನಿಂತು ಬೀಗರಕಡೆಯವರನ್ನು ಕೈಮುಗಿದು ಸ್ವಾಗತಿಸಿದರು ಪರಸ್ಪರ ಕ್ಷೇಮಸಮಾಚಾರ ವಿತರಣೆಯಾದನಂತರ ಗಿರಿಯಮ್ಮನಿಗೆ ಹಿರಿಯ ಮುತ್ತೈದೆಯರಿಬ್ಬರು ಅವಳು ಬಾಗಿಲಿಗೆ ಬರುತ್ತಿದ್ದ ಹಾಗೆಯೇ ಆರತಿ ಮಾಡಿದರು ಮದುವೆಗೆ ಹೋಗಲಾಗದಿದ್ದ ಅನೇಕರು ಗಿರಿಯಮ್ಮನ ರೂಪ ಗುಣಗಳನ್ನು ಮತ್ತೊಬ್ಬರ ಬಾಯಿಂದ ಕೇಳಿ ತಿಳಿದಿದ್ದವರು ಅವಳು ಬಂದಕೂಡಲೇ ಅವಳ ವರ್ಚಸ್ಸಿಗೆ ಅಚ್ಚರಿಪಟ್ಟರು ದೈವೀಕಳೆಯನ್ನು ಹೊತ್ತ ಎಳೆವಯಸ್ಸಿನ ಹುಡುಗಿ ಎಲ್ಲರ ಮನಸ್ಸನ್ನು ಕ್ಷಣ ಮಾತ್ರದಲ್ಲಿ ಸೂರೆಗೊಂಡಳು

ಗಿರಿಯಮ್ಮ ಹೊಸಿಲಮೇಲಿದ್ದ ಅಕ್ಕಿ ಬೆಲ್ಲವನ್ನು ಬಲಗಾಲಲ್ಲಿ ಮುಟ್ಟಿ ಅತ್ತೆಯ ಮನೆಯನ್ನು ಪ್ರಥಮಬಾರಿಗೆ ಪ್ರವೇಶಮಾಡಿದಳು

ತಿಪ್ಪರಸನಂತೂ ಹೆಂಡತಿಯ ಆಗಮನಕ್ಕಾಗಿ ಬಹು ಆತುರದಿಂದ ನಿರೀಕ್ಷಿಸುತ್ತಿದ್ದವನು ಈಗ ಅವಳು ಬಂದು ಎದುರಿಗೇ ಪ್ರತ್ಯಕ್ಷಳಾದಾಗ ಅವನಿಗೆ ತನ್ನ ಮಹದಾನಂದವನ್ನು ಹಂಚಿಕೊಳ್ಳಲು ಬೇರಾರೂ ಸಿಗದೆ ಯಾರಿಗೂ ಕಾಣದಂತೆ ಕೊಟ್ಟಿಗೆಯೊಳಗೆ ನುಗ್ಗಿ ಅಲ್ಲೇ ನಿಂತಿದ್ದ ಮನೆಯ ಆಕಳು ಕಪಿಲೆಯ ಕಿವಿಯೊಳಗೆ ಸಂತಸದಿಂದ ಉಸಿರ್ಗರೆದ

"ಕಪಿಲಾ ನಿನ್ನೊಡತಿ ಬಂದ್ಲು ಇನ್ಮೇಲೆ ಆವಳೇ ನಿನ್ನ ಹಾಲು ಕರೆಯೋದು "

ತನಗೆ ಅವನ ಮಾತು ಅರ್ಥವಾಯಿತೆಂಬಂತೆ ಗೋವು ತನ್ನ ಗೋಣನ್ನಲ್ಲಾಡಿಸಿತು ಅವನು ಮತ್ತೆ ಮೆಲ್ಲನೆ ಅಲ್ಲಿಂದ ನುಸುಳಿ ಚಪ್ಪರಕ್ಕೆ ಬಂದು ನಿಂತ ಮಂಗಳ ವಾದ್ಯಗಳ ಮೊರೆತದಲ್ಲಿ ಬಿರುಸಿನಿಂದ ಸಾಗಿದ್ದ ಕಾರ್ಯಕ್ರಮಗಳಲ್ಲಿ ಅವನದೇ ಮುಖ್ಯ ಪಾತ್ರ

ಅಂದೇ ನಿಷೇಕಪ್ರಸ್ತಕ್ಕೆ ಪ್ರಶಸ್ತವಾದ ದಿನವೆಂದು ಗೊತ್ತುಪಡಿಸಿದ್ದ ಕಾರಣ ಕಾರ್ಯಕಲಾಪಗಳು ಸಾಗಬೇಕಾಗಿದ್ದಿತು ತಿಪ್ಪರಸನಿಗೂ, ಗಿರಿಯಮ್ಮನಿಗೂ ಎಣ್ಣೆ ಶಾಸ್ತ್ರಮಾಡಿ ಅಭ್ಯಂಜನ ಮಾಡಿಸಿದರು ಪುರೋಹಿತರು ಹವನ ಹೋಮಗಳನ್ನು ನಡೆಸಿದರು ತಿಪ್ಪರಸ ಮೌನವಾಗಿ ಹೆಂಡತಿಯನ್ನು ವೀಕ್ಷಿಸುತ್ತಿದ್ದನೇ ವಿನಃ ಅವಳೊಡನೆ ಸರಾಗವಾಗಿ ಮಾತನಾಡಲು ಅವನಿಗೆ ಬಾಯಿ ಕಟ್ಟಿದಂತಾಗಿತ್ತು ಏಕಾಂತವಾಗಿ ಅವಳೊಡನೆ ಮಾತನಾಡುವ ಅವಕಾಶವನ್ನು ಅವನು ನಿರೀಕ್ಷಿಸುತ್ತಿದ್ದ ಕ್ಷಣ ಕ್ಷಣವೂ ಒಂದೊಂದು ಯುಗದಂತೆ ಭಾಸವಾಗುತ್ತಿತ್ತವನಿಗೆ

ಕಾರ್ಯಕಲಾಪಗಳೆಲ್ಲ ಮುಗಿದನಂತರ ವಿಶ್ರಾಂತಿಗೆಂದು ಎಲ್ಲರೂ ಒಂದೆಡೆ ಬೆರೆತು ಮಾತುಕಥೆಗಾರಂಬಿಸಿದರು

ಹೆಂಗೆಳೆಯರು ಪ್ರತ್ಯೇಕವಾಗಿ ಚಪ್ಪರದ ಒಂದು ಕಡೆ ಕೂತಾಗ ಅವರ ಮಧ್ಯೆ ಕುಳಿತ ಗಿರಿಯಮ್ಮನೇ ಅವರೆಲ್ಲರ ಕೇಂದ್ರಬಿಂದುವಾದಳು ಭೋಜನಕ್ಕೆ ಇನ್ನೂ ಕಾಲಾವಕಾಶವಿದೆ ಎಂದರಿತ ಗಂಡಸರು ಮತ್ತೊಂದೆಡೆ ಸೇರಿ ಮಾತು ಕಥೆಗಾರಂಭಿಸಿದ್ದರು ಅವರ ಬದಿಗೇ ಕುಳಿತ ತಿಪ್ಪರಸನಿಗೆ ಹೆಂಡತಿಯನ್ನು ಆಗಾಗ್ಗೆ ವೀಕ್ಷಿಸುವುದೇ ಒಂದು ಕೆಲಸವಾಗಿತ್ತು

ಮಾತಿನ ಮಧ್ಯೆ ರಂಗನಾಥಸ್ವಾಮಿಯ ವಿಷಯ ಪ್ರಸ್ತಾಪ ಬಂದಾಗ ಗಿರಿಯಮ್ಮ ಆ ಕೂಡಲೇ ತಾನು ರಂಗನಾಥಸ್ವಾಮಿಯನ್ನು ನೋಡಲು ಬಯಸುವುದಾಗಿ ಅಲ್ಲಿದ್ದವರಿಗೆ ತಿಳಿಸಿದಾಗ, ಆ ಗುಂಪಿನಲ್ಲೇ ಇದ್ದ ಅವಳ ಸಮವಯಸ್ಕಳು ಗಿರಿಯಮ್ಮನ ಅತ್ತೆ ಮಾವಂದಿರಿಗೆ ಗಿರಿಯಮ್ಮನ ಅಪೇಕ್ಷೆ ತಿಳಿಸಿದಳು

"ಈಗ ರಂಗನಾಥಸ್ವಾಮಿಯನ್ನು ನೋಡಲು ಹೋಗುವುದೇ ಅವೇಳೆಯ ಹೊತ್ತು ಅಲ್ಲದೆ ಇನ್ನು ಮುಂದೆ ಗಿರಿಯಮ್ಮ ಇಲ್ಲೇ ಇರುತ್ತಾಳೆ ಪ್ರತಿ ದಿನವೂ ದೇವರ ದರುಶನ ಮಾಡಬಹುದು ಅದಕ್ಕೆ ಅಡ್ಡಿಯೇನಿದೆ ?" ಗಿರಿಯಮ್ಮನ ಅತ್ತೆ ಆಕ್ಷೇಪಣೆ ಮಾಡಿದಳು

ಆದರೆ ಕೃಷ್ಣಪ್ಪನವರಿಗೆ ಸೊಸೆಯ ಅಬೀಷ್ಟ ಮಹತ್ತರವಾದುದೇನಲ್ಲ, ಅವಳು ದೈವಬಕ್ತಳು ಇಂದಿನ ದಿನ ಶುಬದದಿನ ದೇವರ ದರುಶನ ಪಡೆದು ಬರಲಿ ಎಂದವರು ಸೂಚಿಸಿದಾಗ ಗಿರಿಯಮ್ಮ ತನ್ನ ಸಮವಯಸ್ಕರೊಡನೆ ಸಂತಸದಿಂದ ರಂಗನಾಥಸ್ವಾಮಿಯ ದರುಶನಕ್ಕೆ ಹೊರಟಳು ಕೃಷ್ಣಪ್ಪನವರು ಸೊಸೆಯನ್ನು ಹುಷಾರಾಗಿ ಕರೆದುಕೊಂಡು ಹೋಗಿಬರುವಂತೆ ಅವಳೊಂದಿಗೆ ಹೊರಟ ಇತರರಿಗೆ ತಿಳಿಸಿದರು ಗಿರಿಯಮ್ಮನಿಗೆ ಒಂದು ಬಗೆಯ ಅನಿರ್ವಚನೀಯವಾದ ಆನಂದದ ಅನುಭವವಾಯ್ತು

ದೊಡ್ಡದಾದ ದಿಬ್ಬ, ಅದಕ್ಕಂಟಿದಂತೆಯೇ ಹೆಳವನಕಟ್ಟೆಯ ಕೆರೆಯ ಸಮೀಪದಲ್ಲಿಯೇ ರಂಗನಾಥಸ್ವಾಮಿಯ ಆಲಯ

ಹೆಳವನಕಟ್ಟೆ ಎಂಬ ಹೆಸರು ಈ ಪ್ರದೇಶಕ್ಕೆ ಬರಲು ಕಾರಣವೇನು ? ಎಂದು ಗಿರಿಯಮ್ಮನ ಗೆಳತಿ ಮನದಲ್ಲೇ ಚಿಂತಿಸತೊಡಗಿದಳು

ತನ್ನ ಮನದಲ್ಲಿದ್ದ ಪ್ರಶ್ನೆಯನ್ನು ಬಹಿರಂಗವಾಗಿಯೂ ವ್ಯಕ್ತಪಡಿಸಿದಳು ಹೆಳವನಕಟ್ಟೆ ಕ್ಷೇತ್ರದ ಬಗ್ಗೆ ವಿವರಣೆಯನ್ನಿತ್ತಳು ಅವಳ ಗುಂಪಿನಲ್ಲೊಬ್ಬಳು

"ಹೆಳವನಕಟ್ಟೆ ಅಂದ್ರೆ ಪಂಗುತೀರ್ಥವೆಂದು ಸಂಸ್ಕೃತದ ಮೂಲ ಹೆಸರು ದೇವಜಾತಿಯ ಅರುಣನಿಗೆ ತೊಡೆಗಳಿಲ್ಲದ ಕಾರಣ ಪಂಗುವೆಂದು ಹೆಸರಾಗುತ್ತದೆ ಆ ಪಂಗುವು ಒಂದಾನೊಂದು ಕಾಲದಲ್ಲಿ ತಪಸ್ಸುಮಾಡಿ ಪರಮಾತ್ಮನನ್ನು

ಪ್ರತ್ಯಕ್ಷಗೊಳಿಸಿಕೊಂಡ ಕಥೆ ಪುರಾಣದಲ್ಲಿದೆ ಅದೇ ಕಥೆ ರೂಪಾಂತರವಾಗಿ ಕಾಲಕ್ರಮೇಣ ಒಬ್ಬ ಹೆಳವನ ಕಥೆಯಾಗಿ ಪರಿಣಮಿಸಿ, ಅವನು ಈ ಕಟ್ಟೆಯನ್ನು ಕಟ್ಟಿಸಿದ್ದಾನೆಂತ ಜನರ ಹೇಳಿಕೆ, ಶ್ರೀರಂಗನಾಥನು ಅವನಿಗೆ ಹುತ್ತದಲ್ಲಿ ಪ್ರಸನ್ನನಾಗಿ ಅವನೇ ದೇವರಿಗೆ ದೇವಸ್ಥಾನ ಕಟ್ಟಿಸಿದನೆಂದು ಪ್ರತೀತಿ

ಆದರೆ ಮತ್ತೆ ಕೆಲವರು ಬೇರೆ ಬಗೆಯಾಗಿ ಹೇಳುತ್ತಾರೆ ಪ್ರತಿದಿನವೂ ಕಟ್ಟೆಯಿರುವ ಸ್ಥಳದಲ್ಲಿ ಹೆಳವನೊಬ್ಬ ಬಿಕ್ಷಕ್ಕಾಗಿ ಕೂಡುತ್ತಿದ್ದನಂತೆ ಪಕ್ಕದಲ್ಲಿ ಗುಡ್ಡಗಳಿರುವ ಕಾರಣ ಕಟ್ಟೆಯ ಒಳಭಾಗ ತಗ್ಗುನೆಲವಾಗಿದ್ದು ಪ್ರತಿದಿನವೂ ದನಕರುಗಳನ್ನು ಮೇಯಿಸಲು ಇಲ್ಲಿಗೆ ಹುಡುಗರು ಬರುತ್ತಿದ್ದರಂತೆ ಸುತ್ತ ಮುತ್ತಣ ಗ್ರಾಮದ ದನಕರುಗಳನ್ನು ಮೇಯಿಸಲು ಬರುವ ದನಕಾಯುವ ಹುಡುಗರು ಇಲ್ಲೇ ಕುಳಿತುಕೊಳ್ಳುತ್ತಿದ್ದ ಹೆಳವನಿಗೆ ದನಗಳನ್ನು ನೋಡಿಕೊಳ್ಳಲು ಒಪ್ಪಿಸಿ ಅವರು ಗೋಲಿಯಾಡುವುದೋ, ಇಲ್ಲವೇ ಮರಕೋತಿಯಾಟ ಆಡುವುದೋ ಮಾಡುತ್ತಿದ್ದರು ತಾವು ತಂದ ಬುತ್ತಿಯಲ್ಲಿ ಹೆಳವನಿಗೂ ಪಾಲು ಕೊಡುತ್ತಿದ್ದರು ಮಳೆ, ಗಾಳಿ, ಬಿಸಿಲುಗಳಿಂದ ರಕ್ಷಿಸಲು ಅವನಿಗಾಗಿ ಆ ಹುಡುಗರೇ ಗುಡಿಸಲೊಂದನ್ನು ನಿರ್ಮಿಸಿದರು

ದನಗಾವರು ಕುಡಿಯುವ ಹಾಲು ಅವನಿಗೂ ಕೊಡುತ್ತಿದ್ದರು ಹೀಗೆ ಗೊಲ್ಲರ ನೆರವಿನಿಂದ ಹೆಳವ ತನ್ನಿಚ್ಛೆಯಂತೆ ಒಂದು ಗೋಕಟ್ಟೆಯನ್ನು ನಿರ್ಮಿಸಿದ ಸುತ್ತಮುತ್ತಣ ಗ್ರಾಮಸ್ಥರು ಅಲ್ಲಿಗೆ ಬಂದು ನೆಲೆಸಿದರು ಮಳೆಯಿಂದ ಕಲ್ಲು ಮಣ್ಣುಗಳ ಕಟ್ಟೆ ಗಟ್ಟಿಯಾಗಿ ನೀರು ತುಂಬಿ ಮಾರ್ಗಸ್ಥ ಜನಗಳಿಗೆ ವಸತಿಯಾಯ್ತು ಇದು ಹೆಳವ ಕಟ್ಟಿಸಿದ ಕಾರಣ ಹೆಳವನಕಟ್ಟೆಂತ ಕರೀತಾರೆ ಹೆಳವನಕಟ್ಟೆ ಪಕ್ಕದಲ್ಲಿ ಒಂದು ಹುತ್ತವಿತ್ತು ಪ್ರತಿದಿನವೂ ಕೆಚ್ಚಲು ಬಾರವಾದ ಆಕಳುಗಳು ಹುತ್ತದ ಪಕ್ಕಕ್ಕೆ ಹೊದ್ದಿದ್ದ ಕಲ್ಲಿಗೊತ್ತಿ ಹಾಲು ಕರೆಯುತ್ತಿತ್ತಂತೆ ಇದನ್ನು ಹೆಳವ ನೋಡಿದ ಹುತ್ತದಲ್ಲಿ ಏನೋ ಇರಬೇಕೆಂದು ಅವನಿಗನ್ನಿಸಿತು ಅಲ್ಲದೆ ಆವನಿಗೆ ಸ್ವಪ್ನವೂ ಆಯಿತಂತೆ ಹುತ್ತ ಅಗೆದಾಗ ಅವನಿಗೆ ಹರಿಹರಬ್ರಹ್ಮರ ಮೂರ್ತಿಗಳು ದೊರೆತವು. ಅನಂತರ ಅಲ್ಲೇ ಗುಡಿಯಾಯಿತು ದೇವರಿಗೆ ಒಕ್ಕಲು ನಾವೆಂದು ಜನರು ನಡೆದು ಕೊಂಡರು ರಂಗನಾಥನ ಕ್ಷೇತ್ರವೆಂದು ಹೆಸರುವಾಸಿಯಾಯ್ತು ಅಂತ ಕಥೆ ಇದೆ ''

ಅವಳು ಹೇಳಿದ ಕಥೆಯನ್ನೆಲ್ಲಾ ಕೇಳಿಸಿಕೊಂಡ ಗಿರಿಯಮ್ಮನಿಗೆ ಕ್ಷೇತ್ರದ ಮಹಿಮೆ ಹಿರಿದು ಎನ್ನಿಸಿತು. ದೇವರನ್ನು ಕಾಣುವ ಅಭಿಲಾಷೆಯಿಂದ ಸರಸರನೆ ಹೆಜ್ಜೆ ಹಾಕಿದಳು.

ಗಿರಿಯಮ್ಮ ಕೆರೆಯ ಮುಂದೆ ಬಂದು ನಿಂತಾಗ ಅವಳ ಮನಸ್ಸಿಗೆ ನೀರನ್ನು ನೋಡುತ್ತಿದ್ದಂತೆಯೇ ಏನೋ ಒಂದು ಬಗೆಯ ಹರ್ಷ. ಅವಳು ನೀರಿನ ಬಳಿ ಕುಳಿತು ನೀರನ್ನು ತೆಗೆದುಕೊಂಡು ಮೈ ಮೇಲೆ ಪ್ರೋಕ್ಷಿಸಿಕೊಂಡಳು. ಅಲ್ಲಿ ಕಾಣುವುದೇ ರಂಗನಾಥಸ್ವಾಮಿಯ ದೇವಲಯವೆಂದು ಗಿರಿಯಮ್ಮನಿಗೆ ಮತ್ತೊಬ್ಬಳು ದೇವಸ್ಥಾನದತ್ತ ಬೊಟ್ಟುಮಾಡಿ ತೋರಿಸಿದಳು.

"ಬಾಲ್ಯದಲ್ಲಿ ನೋಡಿದ್ದೇನೆ" ಗಿರಿಯಮ್ಮ ಹೀಗೆಂದು ಉತ್ತರಿಸುತ್ತ ಅಕ್ಕ ಪಕ್ಕದವರನ್ನೆಲ್ಲಾ ಮರೆತು ದೇವಸ್ಥಾನದತ್ತ ಓಡಿದಳು. ಅವಳ ಸಂಗಡಿಗರು ಅವಳನ್ನು ಸೇರುವ ಹೊತ್ತಿಗೆ ಗಿರಿಯಮ್ಮ ದೇವರ ಮುಂದೆ ಭಕ್ತಿ ಭಾವದಿಂದ ತಾನೇ ರಚಿಸಿದ ಹಾಡನ್ನು ಹಾಡಿಕೊಂಡು ಮೈಮರೆತು ನರ್ತಿಸತೊಡಗಿದ್ದಳು.

ರಾಗ—ಪೂರ್ವಿ                ತಾಳ—ಆದಿ (ತೀನ್‌ತಾಲ್)

ಕಂಡೆನೀಗ ರಂಗನಾಥನ ಕಾರುಣ್ಯನಿಧಿಯ ಕಂಡೆನೀಗ ರಂಗನಾಥನ ।
ಮಂಡಲದೊಳುದ್ದಂಡ ಮೂರುತಿ । ಹಿಂಡು ಹಿಂಡು ದೈತ್ಯರ ತಂಡ ತಂಡದಿ
ತುಂಡು ತುಂಡು ಮಾಡಿದ ಸ್ವಾಮಿಯೆ ॥ ಪಲ್ಲವಿ ॥

ಕಾಮಪಿತನ ಕೌಸ್ತುಭಹಾರನಾ । ಕಸ್ತೂರಿ ನಾಮವ ನೇಮದಿಂದ ಧರಿಸಿದಾತನ ।
ವಾಮಭಾಗ ಲಕ್ಷ್ಮಿಸಹಿತ ಹೇಮ ಮಂಟಪದೊಳಗೆ ಕುಳಿತು ।
ಕಾಮಿಸಿದ ಭಕ್ತರಿಗೆ ಕಾಮಿತಾರ್ಥ ಕೊಡುವ ಸ್ವಾಮಿ ॥ ೧ ॥

ಗರುಡ ವಾಹನವೇರಿ ಗಮಕದೀ । ಚರಿಸುತ ಬಂದು ।
ಸರಿಸಿಯೊಳು ಕರಿಯ ಸಲುಹಿದಿ ॥
ಪರಮಭಕ್ತರ ವಾಸುದೇವ ಅರುಣವಾರಿದ್ರಿ ಕಮಲನಯನ ।
ಉರುಗಶಯನ ಉದ್ಧಾರಿ ನಿನ್ನ ಮೊರೆಯಹೊಕ್ಕೆ ಕಾಯೋ ಎನ್ನ ॥ ೨ ॥

ಇಂದುಧರನ ಸಖನೆ ಕೇಳಯ್ಯ । ಬಂದಂಥ ದುರಿತ ।
ಹಿಂದು ಮಾಡಿ ಮುಂದೆ ಸಲಹಯ್ಯಾ ॥
ತಂದೆಯಡಿಯ ಹೊಂದಿದೇನು ಇಂದು ಹೆಳವನಕಟ್ಟೆ ರಂಗ ।
ಆನಂದಪಡಿಸೋ ರಾಮಲಿಂಗ । ಹೊಂದಿದೇನು ನಿನ್ನ ಚರಣ ॥ ೩ ॥

ಹೀಗೆ ಎಷ್ಟೋ ಹೊತ್ತು ಮೈಮರೆತು ಗಿರಿಯಮ್ಮ ತನ್ನ ಮಧುರ ಸಂಗೀತ ದೊಡನೆ ನರ್ತಿಸುತ್ತಿರುವುದನ್ನು ಕಂಡು ಆವಳ ಸಂಗಡಿಗರು ಬೆರಗಾಗಿ ನಿಂತು ನೋಡುತ್ತಲೇ ಇದ್ದರು ಅನಂತರ ಅವರಲ್ಲೇ ಒಬ್ಬಳು ವೇಳೆಯ ಅರಿವನ್ನು ಮಾಡಿಕೊಡುತ್ತಾ ಹೀಗೆಂದಳು

"ನಾವು ಬಂದು ಬಹಳವೇ ಹೊತ್ತಾಯ್ತು ಮನೆಯಲ್ಲಿ ಶುಭಕಾರ್ಯ ಬೇರೆ ಇನ್ನು ಹೊರಡೋಣವೇನು ?"

ಅವಳ ಮಾತಿನಿಂದ ಬೇರೆಲ್ಲರೂ ಎಚ್ಚೆತ್ತು ಗಿರಿಯಮ್ಮನನ್ನು ಎಚ್ಚರಿಸಿದರು

"ಗಿರಿಯಮ್ಮ, ನೀನು ಇನ್ನೂ ಇಲ್ಲೇ ಇದ್ದರೆ ತಿಪ್ಪರಸರು ಇಲ್ಲಿಗೇ ನಿನ್ನನ್ನು ಹುಡುಕಿಕೊಂಡು ಬಂದುಬಿಡುತ್ತಾರಷ್ಟೇ ನಡೆ ಹೋಗೋಣ ಇನ್ನು"

"ನನಗೆ ರಂಗನಾಥಸ್ವಾಮಿಯನ್ನು ಬಿಟ್ಟುಬರಲು ಮನಸ್ಸೇ ಆಗುತ್ತಿಲ್ಲ ವೆಂಕು"

ತನ್ನ ಗೆಳತಿಗೆ ಗಿರಿಯಮ್ಮನೆಂದಾಗ, ಎಲ್ಲರೂ ಬಲವಂತವಾಗಿ ಅಲ್ಲಿಂದ ಅವಳನ್ನು ಕದಲಿಸಲು ಪ್ರಯತ್ನಿಸತೊಡಗಿದರು

ಗಿರಿಯಮ್ಮನಿಗೆ ಅವರಿಂದ ಬಿಡುಗಡೆಯಾಗದೆ ಅವಳು ಶ್ರೀರಂಗನಾಥನ ಮೂರ್ತಿಯನ್ನು ಪದೇ ಪದೇ ಕಣ್ಣಿಗೊತ್ತಿಕೊಳ್ಳುತ್ತಾ ಒಲ್ಲದ ಮನಸ್ಸಿನಿಂದ ಅಲ್ಲಿಂದ ಕದಲಿದಳು ರಂಗನಾಥಸ್ವಾಮಿಯ ದರುಶನ ಮಾತ್ರದಿಂದಲೇ ಅವಳ ದೇಹದಲ್ಲಡಗಿದ್ದ ಅಲ್ಪ ಸ್ವಲ್ಪ ಮಮಕಾರವೂ ದೂರವಾಗಿ ಅವಳು ಸಂಪೂರ್ಣವಾಗಿ ಹರಿಭಕ್ತಳಾದಳು ಅವಳ ದೇಹಮಾತ್ರ ಸಂಗಡಿಗರೊಡನೆ ಮನೆ ಸೇರಿತಾದರೂ ಮನಸ್ಸು ಸಂಪೂರ್ಣವಾಗಿ ರಂಗನಾಥಸ್ವಾಮಿಯಲ್ಲಿ ನಾಟಿತ್ತು

ಗಿರಿಯಮ್ಮ ಬಹಳ ಹೊತ್ತು ಬಾರದ ಕಾರಣ ಮನೆಯವರೆಲ್ಲರೂ ಗಾಬರಿ ಗೊಂಡಿದ್ದರು ಅವಳು ಸಂಗಡಿಗರೊಡನೆ ಬರುತ್ತಿದ್ದ ಹಾಗೆಯೇ ಗಾಭರಿಗೊಂಡಿದ್ದ ಎಲ್ಲರ ಮುಖವೂ ಅರಳಿತು ಗಿರಿಯಮ್ಮ ಹಾಡಿನೊಡನೆ ದೇವರ ಮುಂದೆ ನರ್ತಿಸಿದ ವಿಷಯ ತಿಳಿದ ಅವಳ ವಾರಗಿತ್ತಿ, ವ್ಯಂಗ್ಯವಾಡಿದಳು

"ದೇವರಮುಂದೆ ಹಾಡಿ ನರ್ತಿಸುವುದೆಂದರೇನು ಸಂಸಾರಸ್ಥರ ಲಕ್ಷಣವೇ ಇವೆಲ್ಲಾ ?"

ಗಿರಿಯಮ್ಮನಿಗಾದರೂ ಮನೆಯಲ್ಲಿ ಇತರ ಯಾವ ಕಾರ್ಯಕಲಾಪಗಳೂ ಬೇಡವಾಯ್ತು ಅವಳ ಮನದ ತುಂಬಾ ರಂಗನಾಥಸ್ವಾಮಿಯೇ ತುಂಬಿ ಹೋಗಿದ್ದ ಇತರ ಎಲ್ಲ ವಸ್ತುಗಳೂ ಅವಳಿಗೆ ನಶ್ವರ, ತೃಣಕ್ಕೆ ಸಮಾನವೆನ್ನಿಸಿತು

ಭೋಜನಾ ನಂತರ ರಾತ್ರಿ ನಿಷೇಕ ಶಾಸ್ತ್ರಕ್ಕೆ ಸಕಲ ಸಿದ್ಧತೆಗಳೂ ಆರಂಭವಾದವು ಮಲಗುವ ಮನೆಯನ್ನು ನಾನಾ ಬಗೆಯಾಗಿ ಅಲಂಕರಿಸಿದರು ಹೆಂಗಳೆಯರು ಯಾವ ಹಾಸ್ಯಕ್ಕೂ ಅವಕಾಶವೀಯದಂತೆ ಗಿರಿಯಮ್ಮ ಗಂಬೀರ ಮುದ್ರೆ ತಾಳಿದವಳಾಗಿದ್ದಳು

ಅವಳ ಗಂಬೀರವದನವನ್ನು ಕಂಡು "ಅತ್ತೆಯ ಮನೆಗೆ ಬಂದಿದ್ದಾಳೆ, ಹೊಸ ಜಾಗ, ಹೊಸ ಜನ, ಅದಕ್ಕೇ ಮಂಕಾಗಿದ್ದಾಳೆ ಕ್ರಮೇಣ ಸರಿ ಹೋದೀತು" ಎಂದುಕೊಂಡರು ಹಲವರು ಮತ್ತೆ ಕೆಲವರು "ತನಗೇ ರೂಪವಿದೆ ಎಂಬ ಹೆಮ್ಮೆ ಹುಡುಗಿಗೆ" ಎಂದು ಭಾವಿಸಿದರು

"ಯಾರಿಗೂ ಬಾರದ ಸಂಗೀತ ಇವಳಿಗೆ ಗೊತ್ತೇನೋ ಏನೋ ಒಂದೆರಡು ಹಾಡು ಬಂದಮಾತ್ರಕ್ಕೆ ತಲೆಯೇ ತಿರುಗುತ್ತದೆ" ಎಂದು ಮತ್ತೆ ಹಲವರ ತರ್ಕ ಒಟ್ಟಿನಲ್ಲಿ ನಡೆಯಬೇಕಾದುದೆಲ್ಲಾ ನಡೆಯಲೇಬೇಕಿತ್ತು

ಸಂಜೆಯಾಗುತ್ತಿದ್ದಂತೆಯೇ ಗಿರಿಯಮ್ಮನಿಗೆ ಹೆಂಗಸರು ಅಲಂಕರಿಸತೊಡಗಿದರು ಅತ್ತೆಯ ಮನೆಯ ಉಡುಗೊರೆಯಾಗಿ ಕೆಂಪು ಜರತಾರಿಯ ಪೀತಾಂಬರವನ್ನುಡಿಸಿ, ಸಕಲ ಆಭರಣಗಳನ್ನೂ ತೊಡಿಸಿ, ಅವಳ ತಲೆಯ ತುಂಬಾ ಹೂವು ಮುಡಿಸಿ ಅವಳ ಅಂದವನ್ನು ಮತ್ತೆ ಮತ್ತೆ ನೋಡಿ ನೆಟಿಕೆ ಮುರಿದು ದೃಷ್ಟಿ ತೆಗೆದರು

ಗಿರಿಯಮ್ಮ ಯಾಂತ್ರಿಕವಾಗಿ ಓಡಿಯಾಡಿಕೊಂಡಿದ್ದರೂ ಮನಸ್ಸಿನಲ್ಲೇ ಅವಳಿಗೆ ಕಳವಳ ಆರಂಭವಾಗಿತ್ತು, "ನಿನ್ನ ಜನ್ಮ ಸಂಸಾರಕ್ಕಾಗಿ ಅಲ್ಲ ನೀನು ಲೋಕದ ಕಲ್ಯಾಣಕ್ಕಾಗಿ ಹುಟ್ಟಿದವಳು ಮದುವೆ ಗಂಡ ಸಂಸಾರ ಇವೆಲ್ಲಾ ನಶ್ವರ ಗಿರಿಯಮ್ಮ ದೇವರ ಸೇವೆಯೇ ಇಹ ಪರದ ಸಾಧನ "

ಗಿರಿಯಮ್ಮನ ಅಂತರ್ಯದಲ್ಲಿ ಕೋಲಾಹಲವೇರ್ಪಟ್ಟಿತು ಗಿರಿಯಮ್ಮ ಏನು ಮಾಡಲೂ ತೋರದೆ ಚಡಪಡಿಸುತ್ತಿದ್ದಳು ಇತ್ತ ತಿಪ್ಪರಸ ಹೆಂಡತಿಯನ್ನು ಏಕಾಂತವಾಗಿ ಸಂಧಿಸಲು ಹಾತೊರೆಯುತ್ತಿದ್ದ ಬಹುದಿನಗಳಿಂದಲೂ ನಿರೀಕ್ಷಿಸಿದ್ದ ಬಯಕೆ ಈಡೇರುವ ಇಂದು ಅವನಿಗೆ ತಾನು ದೇವಲೋಕದಲ್ಲಿಯೇ ವಿಹರಿಸುವಂತೆ ಅನುಭವವಾಗತೊಡಗಿತು

ಗಿರಿಯಮ್ಮನಿಗೆ ತನ್ನ ಮನದ ಅಳಲನ್ನು ಯಾರಮುಂದೆ ಹೇಳಿಕೊಳ್ಳಲೂ ಸಾಧ್ಯವಾಗದೆ ಕೊನೆಗೆ ತನ್ನ ಚಿಕ್ಕಮ್ಮನನ್ನು ಏಕಾಂತವಾಗಿ ಒಂದೆಡೆ ಕರೆದುಕೊಂಡು ಹೋಗಿ ವಿಷಯವನ್ನು ತಿಳಿಸಿದಳು

"ಚಿಕ್ಕಮ್ಮ ಮದುವೆ, ಸಂಸಾರ ಮೊದಲಾದುವುಗಳಿಗೆಲ್ಲಾ ಏಕೋ ಏನೋ ನನ್ನ ಮನಸ್ಸು ಒಡಂಬಡುತ್ತಿಲ್ಲ ಮದುವೆಯೇ ಬೇಡವೆನ್ನಲು ಅಂದು ನನಗೆ ಪರಮಾತ್ಮ ಬಾಯಿ ಕಟ್ಟಿಹಾಕಿದ್ದ ಆದರೆ ಇಂದು ಖಂಡಿತ ನಾನು ಈ ದೇಹವನ್ನು ಸಂಸಾರಬಂಧನಕ್ಕೊಳಪಡಿಸಲಾರೆ ಈ ದೇಹ ಪರಮಾತ್ಮನ ಸೇವೆಯಲ್ಲೇ ನಶಿಸಬೇಕೊಂತ ನನ್ನಾಸೆ "

ಅವಳ ಮಾತನ್ನು ಕೇಳಿದ ಅವಳ ಚಿಕ್ಕಮ್ಮನಿಗೆ ಏನು ಉತ್ತರಿಸಬೇಕೋ ತಿಳಿಯದಾಯ್ತು ಅವರು ಸಮಾಧಾನಚಿತ್ತರಾಗಿ ನುಡಿದರು

"ಗಿರಿಯಮ್ಮ ನೀನು ದೈವಿಕಸ್ವರೂಪಳು ಎಂದು ನಾವೆಲ್ಲರೂ ಬಲ್ಲೆವು ಆದರೇನು ಮಾಡಲು ಸಾಧ್ಯ ಒಂದು ವೇಳೆ ನಿನಗೆ ಲಗ್ನಮಾಡದೆ ಹಾಗೇ ಬಿಟ್ಟಿದ್ದರೋ, ಅಣ್ಣನ ಮಗಳಿಗೆ ಒಂದು ಲಗ್ನ ಮಾಡದೇ ಹೋದರು 'ಬಿಷ್ಟಪ್ಪನವರು ಬದುಕಿದ್ದಿದ್ದರೆ ಹೀಗಾಗುತ್ತಿತ್ತೇ' ಅನ್ನುವ ಲೋಕಾಪವಾದಕ್ಕಾಗಿ ನಾವು ನಿನಗೆ ಲಗ್ನ ಮಾಡಲೇಬೇಕಾಯ್ತು ಅಲ್ಲದೆ ಹೆಣ್ಣು ಅಬಲೆ ಏಕಾಂಗಿಯಾಗಿ ಏನೂ ಸಾಧಿಸಲಾರಳು ಅವಳಿಗೆ ಪುರುಷನ ಆಶ್ರಯ ಅತ್ಯಗತ್ಯ "

"ಹೆಣ್ಣು ಮದುವೆಯಾದ ಮಾತ್ರಕ್ಕೆ ಏನೂ ಸಾಧಿಸಲಾರಳು ಅನ್ನಬೇಡ ಮಾನವ ಸಹಜವಾದ ಯಾವುದೇ ಕ್ರಿಯೆಗಳನ್ನೂ ನಾವು ಎದುರಿಸಲಸಾಧ್ಯವಾಗುತ್ತದೆ ಸಂಸಾರಿಯಾದ ಮಾತ್ರಕ್ಕೆ ಜೀವನದಲ್ಲಿ ಸಾರ್ಥಕತೆ ಪಡೆಯುವುದು ಅಸಾಧ್ಯ ಎಂದು ಮಾತ್ರ ತಿಳಿಯಬೇಡ ಜೀವನದಲ್ಲಿ ಎಲ್ಲವೂ ಸಾಧ್ಯ ಆದರೆ ಸಾಧನೆ ಬೇಕು

ಶ್ರೀರಾಮಚಂದ್ರನ ಪತ್ನಿ ಸೀತಾದೇವಿಗೆ ಸತ್ವಪರೀಕ್ಷೆ ತಪ್ಪಲಿಲ್ಲವಂತೆ ಇನ್ನು ನಮ್ಮಂತಹವರ ಮಾತೇನು ನೀನು ಕಿರಿಯವಳಾದರೂ ಎಲ್ಲವನ್ನೂ ಬಲ್ಲವಳು ನಿಂಗೆ ಹಿತವಚನ ಹೇಳೋ ಶಕ್ತಿ ನಮಗಂತೂ ಇಲ್ಲ ನೀನು ನಂಬಿರೋ ಆ ಪರಮಾತ್ಮನೇ ನಿನ್ನ ರಕ್ಷಿಸುತ್ತಾನೆ, ಧೈರ್ಯವಾಗಿರು ''

ಗಿರಿಯಮ್ಮನಿಗೆ ಅಷ್ಟಕ್ಕೆ ಸಮಾಧಾನವಾಗದೆ ಅವಳು ತನ್ನ ಅತ್ತೆಯ ಬಳಿಗೆ ಬಂದು ನಿಂತಳು ತಲೆಬಾಗಿ

"ಏನಮ್ಮಾ ?'' ಅವಳ ಅತ್ತೆ ಕೆಲಸದಲ್ಲಿ ತೊಡಗಿದ್ದವರು ಇದುವರೆಗೂ ತಮ್ಮೊಡನೆ ಒಂದು ಮಾತನ್ನೂ ಆಡದೆ ಮೌನಿಯಾದ ಸೊಸೆ ತಾನಾಗಿಯೇ ಮುಂದೆ ಬಂದು ನಿಂತಾಗ ಅಚ್ಚರಿಗೊಂಡು ಅವಳತ್ತ ನೋಡಿದರು

"ಏನಿಲ್ಲ ನಿಮ್ಮೊಡನೆ ಒಂದು ವಿಷಯ ಮಾತನಾಡಬೇಕಿತ್ತು ''

"ಏನದು ?''

"ನೀವು ನನ್ನನ್ನು ನೋಡಿರುವಿರಿ ನನ್ನ ಬಗ್ಗೆ ಕೇಳಿರುವಿರಿ ನಾನು ನಿಮ್ಮ ಮನೆಯ ಸೊಸೆಯಾಗಿ ಬಂದುದೇನೋ ನಿಜ ಆದರೆ, ನನ್ನ ಜನ್ಮ ಸಂಸಾರಬಂಧನಕ್ಕಾಗಿಯಲ್ಲ ನೀವು ನಿಮ್ಮ ಮಗನಿಗೆ ಬೇರೆ ಮದುವೆ ಮಾಡಿಸ ಬೇಕು ನಾನು ಈಗಿರುವಂತೆಯೇ ಇರಬೇಕು ಇದು ನನ್ನಾಸೆ ''

ಸೊಸೆಯ ಮಾತಿನಿಂದ ಅವಳ ಅತ್ತೆ ಹೌಹಾರಿ ನುಡಿದರು "ಏನಮ್ಮಾ ಇದು ನಿನ್ನ ಮಾತು ಮದುವೆಯಾಗುವುದೇ ಸಂಸಾರಬಂಧನಕ್ಕಾಗಿ ನೀನಿನ್ನೂ ತುಂಬಾ ಚಿಕ್ಕವಳು ಗಾಭರಿಗೊಂಡಂತಿದೆ ಕ್ರಮೇಣ ಎಲ್ಲಾ ಸರಿಹೋಗುತ್ತದೆ ''

"ಇಲ್ಲ ಅತ್ತೆ ಇದು ನಿಜವಾಗಿ ನನ್ನ ಹೃದಯದಿಂದ ಬಂದ ಮಾತು ನಿಮ್ಮ ಮಗನಿಗೆ ಬೇರೆ ಮದುವೆ ಮಾಡಿಸಿ ಅವರು ಆ ಹೆಂಡತಿಯೊಡನೆ ಸುಖವಾಗಿರಲಿ ನಾನಂತೂ ಸಂಸಾರ ಮಾಡಲು ಸಾಧ್ಯವಿಲ್ಲ ಈ ದೇಹ ಹೆಳವನಕಟ್ಟೆ ರಂಗನ ಸೇವೆಗೆ ಮೀಸಲು ''

"ಒಳ್ಳೆ ವಿಚಿತ್ರ ಹೆಣ್ಣು ನೀನು ಏನೂ ತಿಳಿಯದವಳೊಂತ ಹೇಳಲೇ ಅಥವಾ ಅಧಿಕಪ್ರಸಂಗಿ ಎನ್ನಲೇ'' ಎಂದರವರು

ಗಿರಿಯಮ್ಮನ ಮಾತು ಕ್ರಮೇಣ ಅವರ ಮಾವನವರ ಕಿವಿಗೂ ಬಿದ್ದಿತು ಕೃಷ್ಣಪ್ಪನವರು ಸೊಸೆಯ ಮಾತನ್ನು ಕೇಳಿದವರೇ ಅಂದರು "ಹುಡುಗಿಗೆ ಸಂಸಾರಬಂಧನಕ್ಕೊಳಗಾಗುವ ಇಚ್ಛೆ ಇಲ್ಲದಮೇಲೆ ಏನು ಮಾಡಲಾದೀತು"

"ಅಂದಮೇಲೆ ಈ ಸೌಭಾಗ್ಯಕ್ಕಾಗಿ ನಾವು ಮಗನಿಗೆ ಲಗ್ನಮಾಡುವ ಪ್ರಮೇಯವಾದರೂ ಏನಿತ್ತು ಧರ್ಮದ ವಿರುದ್ಧ ಮಾತಾಡ್ತಾಳೆ ಅವಳಾಡಿದ್ದೇ ಸರೀಂತ ನಾವು ಕೂತ್ರೆ ಆಯ್ತು ತಿಪ್ಪರಸನ ಜತೆ ಇವಳು ಸಂಸಾರ ಮಾಡದಿದ್ದ ಮೇಲೆ ಇವಳು ಈ ಮನೆಯ ಸೊಸೆ ಅನ್ನಿಸಿಕೊಳ್ಳಲೂ ಸಾಧ್ಯವಿಲ್ಲ ನೀವೂ ಸರಿಯೇ, ನಿಮ್ಮ ಸೊಸೆಯೂ ಸರಿಯೇ" ಗಿರಿಯಮ್ಮನ ಅತ್ತೆ, ಸೊಸೆಯನ್ನು ನಿಂದಿಸಿ ಅಲ್ಲಿಂದ ಕದಲಿದಳು

ತಿಪ್ಪರಸನ ಗೆಳೆಯರು ಅವನಿಗೆಂದರು, "ಹೆಂಡತಿಯನ್ನು ಕೇವಲ ಪೂಜೆ ಮಾಡುವುದಕ್ಕೆ ಲಗ್ನವಾದೆಯೇನೋ, ನೀನೇನು ಗಂಡಸಲ್ಲವೇನು ? ಹೋಗು ನಿನ್ನ ಹೆಂಡತಿಗೆ ತಿಳುವಳಿಕೆ ಹೇಳಿ ಬಾ"

ಹಿರಿಯ ಹೆಂಗೆಳೆಯರು ಗಿರಿಯಮ್ಮನಿಗೆ ಬುದ್ಧಿವಾದ ಹೇಳಿ ವಿಫಲರಾದರು ಅವಳೊಡನೆ ವಾದಮಾಡಲು ಯಾರಿಗೂ ಧೈರ್ಯವಾಗಲಿಲ್ಲ ಆದರೂ ಸಿದ್ಧತೆಗಳೆಲ್ಲಾ ಮುಗಿದಾಗ ಗಿರಿಯಮ್ಮ ಮನದಲ್ಲೇ ರಂಗನಾಥನಲ್ಲಿ ಮೊರೆಯಿಟ್ಟಳು ಮತ್ತೆ ಮತ್ತೆ

ರಾಗ ಜೀವನಪುರಿ ತಾಳ ಕೇರವಾ

ಕಡೆಗಣ್ಣಿನಲ್ಲಿ ನೀ ನೋಡದಿರೆನ್ನಯಾ ?
ಬಿಡಬ್ಯಾಡವೋ ಕೈಯಾ ॥
ಬಡವರ ಬಂಧು ಬಹು ಕೃಪೆಸಿಂಧು ।
ಒಡೆಯ ನೀನಲ್ಲದೆ ನಮಗೆ ಬ್ಯಾರಿಲ್ಲವೋ ॥ ಪ ॥

ಶತ ಅಪರಾಧವ ಮಾಡಿದೆನಯ್ಯಾ । ಸೇರಿದೆ ನಾನಿನ್ನ ಬೆನ್ನಾ ।
ಅತಿ ಪಾತಕಿ ಅಜಮಿಳನ ಉದ್ಧರಿಸಿದೆ ।
ಪೃಥಿವಿಯೊಳಗೆ ಬಿರುದಾಂತ ಶ್ರೀಕಂಠ ॥ ೧ ॥

ನೆಲೆಗಾಣದೆ ನಾನಾ ಪರಿ ಚಿಂತಿಸಿ । ಒಳಗಾದೆನೋ ಹೀಗೆ ।
ಬಳಲಿಸಬ್ಯಾಡವೋ ಭಕ್ತ ಕುಟುಂಬಿ ।
ನಳಿನದಳಾಂಬಕ ನೀ ಸಲಹೆನ್ನನು ॥ ೨ ॥

ಸಾರಿ ಹೇಳುವೆ ಎನ್ನಯ ಬಳಗದ । ಆರಾ ಭಾರ ನಿನ್ನದು ।
ಹೇರೊಪ್ಪಿಸಿದ ಮ್ಯಾಲಾತ್ಕ ಸುಂಕವು ।
ಕಾರುಣ್ಯನಿಧಿ ಹೆಳವನ ಕಟ್ಟೆ ರಂಗಯ್ಯಾ ॥ ೩ ॥

"ಹೇ ಪರಮಾತ್ಮ ಇದುವರೆಗೂ ನಿನ್ನ ಸೇವೆಗಾಗಿಯೇ ಮುಡುಪಾಗಿರಿಸಿದ್ದ ಈ ಶರೀರ ಇಂದು ಸಂಸಾರಬಂಧನಕ್ಕೊಳಗಾಗಬೇಕೇ ಅನ್ಯರ ಪಾಲಾಗಬೇಕೇ ? ನನ್ನ ಸೇವೆಯು ನಿನಗೆ ಬೇಡವೆನ್ನಿಸಿತೇ, ನನ್ನ ಪೂಜೆ ನಿನಗೆ ಒಪ್ಪದೇ, ನನ್ನ ತನು ಮನ ಧನವೂ ನಿನಗೇ ಅರ್ಪಿತವಾಗಿರುವಾಗ, ಈ ದೇಹದ ಒಡೆತನವನ್ನು ಬೇರೆಯುವರು ಹೊಂದುವುದನ್ನು ನೀನು ಒಪ್ಪುವಿಯಾ, ಹೇ ದಯಾಮಯಿ ! ಈ ಬಂಧನದಿಂದ ನೀನೇ ನನ್ನನ್ನು ವಿಮುಕ್ತಿಗೊಳಿಸು ತಂದೆ ''

ಗಿರಿಯಮ್ಮನ ಆರ್ತನಾದ ದೇವರಿಗೆ ತಲುಪಿತೆಂಬಂತೆ, ಅವಳ ಹೃದಯದಲ್ಲಿ ಯಾವುದೋ ಹೊಸ ಚೈತನ್ಯ ಹೊಕ್ಕಿದಂತಾಗಿ ಒಂದೇ ಕ್ಷಣದಲ್ಲಿ ಅವಳ ಅಸಹಾಯಕತೆ ದೂರವಾಗಿ ಅವಳು ಘಟನೆಗಳನ್ನು ನಿರ್ಭಯಳಾಗಿ ಎದುರಿಸುವ ಶಕ್ತಿ ಪಡೆದಳು

ಗಂಡ ಹೆಂಡತಿಯನ್ನು ಕೂಡಿಸಿ ಆರತಿ ಶಾಸ್ತ್ರ ಮಾಡಿದರು ಹಿರಿಯ ಮುತ್ತೈದೆಯರು ಕಿಲ ಕಿಲ ನಗು ಹಾಸ್ಯದೊಡನೆ ಎಲ್ಲರೂ ಹೊರಗೆ ಹೋಗಿ ಬಾಗಿಲೆಳೆದುಕೊಂಡಾಗ ತಿಪ್ಪರಸ ಮೇಲೆದ್ದು ಬಾಗಿಲ ಅಗುಳಿ ಹಾಕಿದವನೇ, ಹಿಂತಿರುಗಿ ಸಂತಸದಿಂದ ಮಂಚದತ್ತ ಧಾವಿಸಿದಾಗ, ಅಲ್ಲಿ ಅಲಂಕರಿಸಿದ ಹಾಸಿಗೆಯ ಮೇಲೆ ಗಿರಿಯಮ್ಮನ ಬದಲಾಗಿ ಹೆಡೆಬಿಚ್ಚಿ ನಿಂತು ಭುಸುಗುಟ್ಟುತ್ತಿರುವ ಸರ್ಪವು ಅವನಿಗೆ ಗೋಚರಿಸಿ ಅವನ ಎದೆಯೊಡೆದಂತಾಯ್ತು ಅನುಮಾನದಿಂದ ಅವನು ಮತ್ತೆ ಮುಂದೆ ಒಂದು ಹೆಜ್ಜೆಯಿಟ್ಟಾಗ ಸರ್ಪ ಬುಸುಗುಟ್ಟಿತು ವಿಕಾರವಾಗಿ ಕೂಗಿಕೊಂಡ ತಿಪ್ಪರಸ ಅಲ್ಲಿಂದ ಕೂಡಲೇ ಕದಲಿದವನಾಗಿ ಕೋಣೆಯಿಂದಾಚೆಗೆ ಏದುಸಿರು ಬಿಡುತ್ತಾ ಬಂದು ಎಲ್ಲರಿಗೂ ವಿಷಯ ತಿಳಿಸಿದ ಎಲ್ಲರೂ ಅವನ ಮಾತಿಗೆ ಅಚ್ಚರಿಗೊಂಡು ಕೋಣೆಯೊಳಗೆ ಹಣಿಕಿದಾಗ ತಲೆಬಾಗಿ ಕುಳಿತ ಗಿರಿಯಮ್ಮನೇ ಎಲ್ಲರಿಗೂ ಗೋಚರವಾಗಿದ್ದಾಳೆ

ತಿಪ್ಪರಸನಿಗೆ ತಿಳುವಳಿಕೆ ಹೇಳಿ ಅವನನ್ನು ಮತ್ತೆ ಅವರೆಲ್ಲರೂ ಕೋಣೆಯೊಳಗೆ ಕಳುಹಿಸಿದಾಗ, ತಿಪ್ಪರಸ ಮತ್ತೆ ಹೆದರಿ ಅದೇ ರೀತಿ ಓಡಿಬಂದಿದ್ದಾನೆ ಹಿರಿಯರೆಲ್ಲರೂ

ಸೇರಿ ಬೇರೊಂದು ಕೋಣೆಯನ್ನು ಅಲಂಕರಿಸಿ ತಿಪ್ಪರಸನನ್ನೂ ಗಿರಿಯಮ್ಮನನ್ನು ಅಲ್ಲಿಗೆ ಕಳುಹಿಸಿದಾಗ ಅಲ್ಲಿಯೂ ಅವನಿಗೆ ಅದೇ ಅನುಭವವಾಗಿದೆ ಇದೇ ರೀತಿ ನಾಲ್ಕಾರು ಕೋಣೆಗಳು ಬದಲಾಯಿಸಿದಾಗ್ಯೂ ತಿಪ್ಪರಸನಿಗೆ ಅದೇ ಅನುಭವವಾದಾಗ ಅವನು ತಂದೆ ತಾಯಿಗಳ ಮುಂದೆ ತಾನಾಗಿಯೇ ವಿವರಿಸಿದ

"ಗಿರಿಯಮ್ಮನು ಆಡಿದ ಮಾತು ಸರಿಯಾದ್ದೇ, ಅವಳು ಸಂಸಾರಕ್ಕಾಗಿ ಈ ಲೋಕದಲ್ಲಿ ಜನ್ಮತಳೆದಿಲ್ಲ, ಅವಳು ದೈವಾಂಶ ಸಂಭೂತಳು ಅವಳ ಹೆಸರಿನಿಂದ ನಮ್ಮ ವಂಶಕ್ಕೆ ಗೌರವ ಹೆಚ್ಚುವುದೇ ವಿನಃ ಕುಂದುವುದಿಲ್ಲ ಅವಳನ್ನು ಯಾರು ಏನೇ ಆಗಲಿ ಮೂದಲಿಸಬಾರದೆಂದು ನನ್ನ ಅಪೇಕ್ಷೆ"

ಕೃಷ್ಣಪ್ಪನವರು ಮಗನ ಮಾತಿಗೆ ತಲೆದೂಗಿದರು ಸೊಸೆಯ ಬಗ್ಗೆ ಅವರಿಗೆ ಆದರ, ಗೌರವಗಳು ಹೆಚ್ಚಿದವು

"ಇವಳ ವಿಚಾರವೇ ಬೇರೆ ಮಾತೇ ಬೇರೆ ನಾವು ಇವಳ ಎದುರಿಗೆ ಏನೂ ಮಾಡಲೂ ಸಾಧ್ಯವಿಲ್ಲ" ಎಂದಿತವರ ಮನ

ಪ್ರಕೃತಿಗೆ ವಿರುದ್ಧವಾಗಿ ಹೋರಾಡುವ ಗಿರಿಯಮ್ಮನ ಬಗ್ಗೆ ಕೃಷ್ಣಪ್ಪ ಮತ್ತು ತಿಪ್ಪರಸ ಇಬ್ಬರನ್ನುಳಿದು ಇತರರಿಗೆಲ್ಲಾ ಒಂದು ಬಗೆಯ ನಿರ್ಲಕ್ಷ್ಯಭಾವ ಬೆಳೆಯಿತು

* * * *

ತನ್ನ ಮಗನ ಬಾಳು ಇವಳಿಂದ ಅಪೂರ್ಣವಾಯಿತಲ್ಲಾ ಎಂಬ ಬೇಸರದಿಂದ ಗಿರಿಯಮ್ಮನ ಅತ್ತೆ ಅವಳಿಗೆ ನಾನಾ ಬಗೆಯಾಗಿ ಕಿರುಕುಳ ಕೊಡಲಾರಂಬಿಸ ತೊಡಗಿದ್ದಳು ಗಿರಿಯಮ್ಮನಾದರೋ ಅತ್ತೆಯ ಉಪದ್ರವಕ್ಕೆ ಬೆದರದೆ ತನ್ನ ಕರ್ತವ್ಯವನ್ನು ಮನೆಯಲ್ಲಿ ಚಾಚೂ ತಪ್ಪದಂತೆ ನಿರ್ವಹಿಸತೊಡಗಿದ್ದಳು ಬೆಳಗ್ಗೆ ನಸುಕಿನಲ್ಲೇ ಎದ್ದು ಮೈತೊಳೆದು ಅಂಗಳ ಸಾರಿಸಿ ರಂಗೋಲಿಯ ಚಿತ್ರ ಬಿಡಿಸುವಳು ಆಕಳುಗಳ ಬಳಿ ಹೋಗಿ ಅದರ ಬಳಿ ಕುಳಿತು ಇಂಪಾಗಿ ಹಾಡುತ್ತಾ ಅದರ ಕೆಚ್ಚಲುಗಳಿಗೆ ಅವಳು ಕೈಹಾಕಿದಳೆಂದರೆ ಅವುಗಳು ಅವಳ ಇಂಪಾದ ಗಾನಕ್ಕೆ ಕಿವಿ ಆಲೈಸುತ್ತಾ ಧಾರಾಕಾರವಾಗಿ ಹಾಲು ನೀಡುತ್ತಿದ್ದವು ಅವಳ ಮೃದು ಬೆರಳಿನ ಸ್ಪರ್ಶಕ್ಕೆ, ಮತ್ತು ಆ ಗಾಯನಕ್ಕೆ ಹೊಂದಿಕೊಂಡಿದ್ದ ಅವು ಬೇರೆಯವರು

ಹಾಲು ಕರೆಯಲು ಬಂದರೆ ಗಲಾಟೆ ಹಚ್ಚುತ್ತಿದ್ದವು ಇಲ್ಲವೇ ಹಾಲು ಕೊಡದಂತೆ ಮೊಂಡಾಟ ಮಾಡುತ್ತಿದ್ದವು

ತಮ್ಮ ಒಡೆಯನಾದ ಗೋಪಾಲಕನ ಚಕ್ಕಳ ಸಾನ್ನಿಧ್ಯವನ್ನು ಅವು ಸದಾಕಾಲವೂ ಬಯಸುತ್ತಿದ್ದವು ಹಾಲು ಕರೆದನಂತರ, ಮಾವನವರ ಪೂಜಾವಿಧಿಗೆ ಹೂವುಗಳನ್ನು ಕಿತ್ತಿ, ದೇವರಮನೆ ಸಾರಿಸಿ, ದೇವರ ಚಿತ್ರವನ್ನು ರಂಗೋಲಿಯಲ್ಲಿ ಅಂದವಾಗಿ ಬಿಡಿಸುತ್ತಿದ್ದಳು ಅನಂತರ ತುಳಸೀಪೂಜೆ ಮುಗಿಸಿ ಮನೆಯ ದೇವರಿಗೆ ದೀಪ ಹಚ್ಚಿ ಪೂಜೆಯಾದ ನಂತರ ದೇವಸ್ಥಾನಕ್ಕೆ ಹೋಗುತ್ತಿದ್ದಳು ದೇವಸ್ಥಾನದ ಮುಂದೆ ಸಾರಿಸಿ ರಂಗೋಲಿ ಚಿತ್ರ ಬಿಡಿಸಿ ರಂಗನಾಥ ಸ್ವಾಮಿಗೆ ನಾನಾ ವಿಧವಾದ ಹೂಗಳಿಂದ ಪೂಜೆಗೈದು, ಭಕ್ತಾದಿಗಳು ತಂದಿತ್ತ ಮೊಸರನ್ನು ಕಡೆಯುತ್ತಾ ಬೆಣ್ಣೆ ತೆಗೆಯುತ್ತಿದ್ದಳು ಆ ಬೆಣ್ಣೆಯನ್ನು ಕಾಸಿದ ತುಪ್ಪದಿಂದ ಪ್ರತಿದಿನ ದೇವರ ದೀಪ ಹಚ್ಚುವ ವಾಡಿಕೆ ಅವಳದು

ವಯಸ್ಸಿನಲ್ಲಿ ತೀರಾ ಕಿರಿಯವಳಾದರೂ ಅವಳ ವೈರಾಗ್ಯ ದೈವಭಕ್ತಿ ಎಲ್ಲರನ್ನೂ ಅವಳೆಡೆಗೆ ಆಕರ್ಷಿಸತೊಡಗಿತು ಗಿರಿಯಮ್ಮನ ಅತ್ತೆ ಮತ್ತು ಅವಳ ವಾರಗಿತ್ತಿಯರಿಗೆ ಅವಳನ್ನು ಕಂಡರೆ ಅಸೂಯೆ, ದ್ವೇಷ ಅವಳದು ದೊಡ್ಡಸ್ತಿಕೆಯೆಂದೂ ಯಾವುದೋ ದುಷ್ಟಶಕ್ತಿಯನ್ನು ವಶಪಡಿಸಿಕೊಂಡು ಗಿರಿಯಮ್ಮ ಎಲ್ಲರನ್ನೂ ಬೆದರಿಸುತ್ತಿದ್ದಾಳೆಂದು ಅವರು ಅವಳ ಬಗ್ಗೆ ಹುಟ್ಟಿಸಿದರು

ಅಂದು ಗಿರಿಯಮ್ಮನಿಗೆ ದೇಹಾಲಸ್ಯವಾದ ಕಾರಣ ಅವಳು ಹಾಲು ಕರೆಯಲು ಸಾಧ್ಯವಾಗದೇ ಅವಳ ವಾರಗಿತ್ತಿ ಹಾಲು ಕರೆಯಲು ಹೊರಟಳು ಗಿರಿಯಮ್ಮನ ಮೃದು ಸ್ಪರ್ಶದ ಬದಲು ಒರಟಾದ ಬೆರಳುಗಳ ಸ್ಪರ್ಶವಾದೊಡನೆಯೇ ಹಸು ಕಾಲು ಝಾಡಿಸಿ ಅವಳನ್ನೊದೆಯಿತು ಹಸುವಿನಿಂದ ಏಟು ತಿಂದ ಕೋಪಕ್ಕೆ ಅವಳು ಅದನ್ನೇ ಸರಿಯಾಗಿ ಥಳಿಸತೊಡಗಿದಳು

"ಮೂಕಪಶುಗಳಾದ ನಿಮಗೂ ಆ ಮಾಯಾವಿನಿಯೇ ಬೇಕೇ, ನಾವೆಲ್ಲಾ ಮನುಷ್ಯರಲ್ಲವೇನೋ ?"

ಹಸು ನೋವು ತಾಳಲಾರದೆ ಕೂಗಿದಾಗ ಅಲ್ಲಿಗೆ ಧಾವಿಸಿದ ಗಿರಿಯಮ್ಮ ವಾರಗಿತ್ತಿಯ ಕೈಯಿಂದ ಬೆತ್ತವನ್ನು ಕಸಿದುಕೊಂಡಳು

"ಏನಕ್ಕಾ ಇದು ಆ ಮೂಕಪ್ರಾಣಿಗಳಿಗೇನು ತಿಳಿಯುತ್ತೆ ಅದನ್ಯಾಕೆ ಹೊಡೀತಿದ್ದೀರಿ"

"ಎಲ್ಲಾ ನಿನ್ನ ಕೈವಾಡವೇ ಇರಬೇಕು ಅದೇನು ಮಾಯ ಮಾಡಿರುವಿಯೋ ಪ್ರಾಣಿಗಳೂ ನಮ್ಮ ಮಾತು ಕೇಳೊಲ್ಲ ಅನ್ನುತ್ವೆ"

ಗಿರಿಯಮ್ಮನಿಗೆ ಹಸುವಿನ ಮೈಮೇಲಿನ ಬರೆಯನ್ನು ನೋಡಿ ಅತೀವ ಸಂಕಟವಾಯ್ತು

"ನನ್ನಿಂದಲ್ಲವೇ ಈದಿನ ನಿನಗೀ ಸ್ಥಿತಿ ಬಂದುದು ಆಯಿತು ಇನ್ನು ಎಂದಿಗೂ ಅವಳು ನಿನ್ನ ಬಳಿ ಬಾರದಂತೆ ಮಾಡುತ್ತೇನೆ" ಎಂದವಳು ಆದರ ಬೆನ್ನು ಸವರಿದಳು

ಪ್ರತಿದಿನವೂ ಗಿರಿಯಮ್ಮ ದೇವಸ್ಥಾನಕ್ಕೆ ಹೋಗಿ ಕುಳಿತು ಮೊಸರು ಕಡೆಯುವುದೂ, ಹಾಡುವುದೂ, ಏಕಾಂಗಿಯಾಗಿ ಅಲ್ಲಿ ನರ್ತಿಸಿ ದೇವರ ಪೂಜೆ ಮಾಡುವುದೂ ಅವಳ ಅತ್ತೆಗೆ ವಾರಗಿತ್ತಿಯರಿಗೆ ಸಹಿಸಲಸಾಧ್ಯವಾದ ಕೋಪ ತರಿಸಿತ್ತು ಅಲ್ಲದೆ ತಮ್ಮ ಮನೆತನಕ್ಕೆ ನರ್ತಿಸುವುದು ಅಸಭ್ಯವೆಂದವರ ವಾದ

ಇದನ್ನೇ ದೊಡ್ಡದಾಗಿ ಮಾಡಲು ಹವಣಿಸಿದರು ಅವರು ಒಂದು ದಿನ ಗಿರಿಯಮ್ಮ ದೇವಸ್ಥಾನಕ್ಕೆ ಹೊರಡುವುದನ್ನೇ ಕಾದಿದ್ದ ಅವಳ ವಾರಗಿತ್ತಿ ಅವಳ ಗಂಡ ತಿಪ್ಪರಸನ ಮುಂದೆ ಬಂದು ನುಡಿದಳು

"ತಿಪ್ಪರಸು, ಗಿರಿಯಮ್ಮ ನಿತ್ಯವೂ ದೇವಾಲಯಕ್ಕೆ ಹೋಗಿ ಪೂಜೆ ಮಾಡಬೇಕೇ? ಮನೆಯಲ್ಲಿರುವ ದೇವರು ದೇವರಲ್ಲವೆ ? ಮನೆಗೆಲಸವನ್ನೆಲ್ಲಾ ಬಿಟ್ಟು ಅವಳು ಅಲ್ಲಿಗೆ ಹೋಗಿ ದೇವರನ್ನು ಒಲಿಸಿಕೊಳ್ಳುವುದೇ ಜೊತೆಗೆ ಕಂಡವರೆದುರಿನಲ್ಲೆಲ್ಲಾ ನರ್ತಿಸುವುದೆಂದರೇನು ? ಪರಪುರುಷರೆದುರು ನರ್ತಿಸುವ ಹೆಣ್ಣಿಗೆ ಮಾನ ಮರ್ಯಾದೆ ಉಳಿದೀತೇ ಹೇಳು ಅವಳು ನಿನ್ನನ್ನು ಪ್ರೀತಿಸುವುದಿರಲಿ, ಅವಳ ತಾಳಿನ ಗಂಡಸಾದ ನಿನಗೆ ಅವಳ ಮೇಲೆ ಅಧಿಕಾರವೇ ಇಲ್ಲವೇ ನಿನ್ನ ಹೆಸರನ್ನೂ ನಮ್ಮ ಮನೆತನದ ಹೆಸರನ್ನೂ ಅವಳು ಖಂಡಿತ ಕೆಡಿಸಲು ಹೊರಟಿದ್ದಾಳೆ ಅಲ್ಲದೆ ಅವಳು ಪ್ರತಿದಿನವೂ ದೇವಸ್ಥಾನಕ್ಕೆ ಏಕಾಂಗಿಯಾಗಿ ಹೋಗಲು ಬೇರೇನೋ ಕಾರಣವಿದ್ದಿರಬೇಕು ಅಲ್ಲಿ ಅವಳಿಗ್ಯಾರಾದರೂ ಪ್ರಿಯತಮನಿರಲೂಬಹುದು"

"ಗಿರಿಯಮ್ಮ ಅಂತಹವಳಲ್ಲವೆಂದು ನನ್ನ ನಂಬಿಕೆ'' ತಿಪ್ಪರಸನೆಂದ

"ನಿಮ್ಮ ನಂಬಿಕೆ ಮುಖ್ಯವಲ್ಲ ಜನರೆದುರು ನಾವು ಬಾಳಬೇಕಾದುದು ಮುಖ್ಯ''

ಮೈದುನನನ್ನು ಕೆರಳಿಸಿದಳು ತಿಪ್ಪರಸನ ಅತ್ತಿಗೆ

ಹೆಂಡತಿಯ ಬಗ್ಗೆ ಅವನಿಗೆ ಯಾವ ಬಗೆಯ ಅನುಮಾನವಿರದಿದ್ದರೂ ಅವನು ಮನಸ್ಸಿನ ಸಮಾಧಾನಕ್ಕಾಗಿ ತಾನೂ ರಂಗನಾಥಸ್ವಾಮಿಯ ದೇವಸ್ಥಾನಕ್ಕೆ ಹೊರಟ ದೇವಸ್ಥಾನದ ಒಳಗೆ ನಿಶ್ಯಬ್ದವಾಗಿತ್ತು ಅಂದು ಏಕಾದಶಿಯಾದ ಪ್ರಯುಕ್ತ ಗಿರಿಯಮ್ಮ ನಸುಕಿನಲ್ಲೇ ಎದ್ದು ದೇವಸ್ಥಾನಕ್ಕೆ ಹೋಗಿ ಅಲ್ಲೇ ಕೆರೆಯಲ್ಲಿ ಮಿಂದು ಒದ್ದೆಬಟ್ಟೆಯಲ್ಲಿಯೇ ದೇವರ ಪೂಜೆ ಮಾಡಿ ಹಾಡಿ ನರ್ತಿಸುವ ಪದ್ಧತಿ ತಿಪ್ಪರಸನೂ ದೇವಸ್ಥಾನದ ಹೊರಗೇ ನಿಂತು ಕಿವಿಯಾಲಿಸಿದ

ಒಳಗಿನಿಂದ ದನಿಯೊಂದು ಕೇಳಿಬಂತು

"ಸ್ವಾಮಿ, ಈ ದಿನ ಏಕಾದಶಿ ದಿನಕ್ಕಿಂತಲೂ ಪ್ರಶಸ್ತವಾದ ದಿನ ನಿನ್ನ ದರುಶನಕ್ಕೆಂದೇ ಹೊತ್ತು ಮೂಡುವ ಮುನ್ನವೇ ಬಂದೆ ಇನ್ನೂ ಎಷ್ಟು ಹೊತ್ತು ಕಾಯಬೇಕು ನಿನ್ನ ಗಿರಿಯಮ್ಮನಲ್ಲಿ ನಿನಗೆ ಪ್ರೀತಿಯಿಲ್ಲವೇ''

"ನಿಜ ಗಿರಿಯಮ್ಮ ದಿನವೂ ದೇವಸ್ಥಾನಕ್ಕೆ ಬರಲು ಇದೇ ಕಾರಣವೇನೋ ಅಲ್ಲದೆ ಈ ವಯಸ್ಸಿಗೇ ಈ ವೈರಾಗ್ಯದ ಸೋಗು ಹೇಗೆ ಬಂತು ? ನನ್ನನ್ನು ವಂಚಿಸುವುದಕ್ಕಾಗಿಯೇ ತಾನೆ'' ಎಂದುಕೊಂಡ ಹೊರಗೆ ನಿಂತ ತಿಪ್ಪರಸ ಆ ಕ್ಷಣಮಾತ್ರದಲ್ಲಿ ಗಿರಿಯಮ್ಮನ ಮೇಲೆ ಅವನ ರೋಷ ಮಿತಿ ಮೀರಿತು

"ಗಿರಿಯಮ್ಮ '' ಅವನು ಕೂಗುತ್ತಲೇ ದೇವಸ್ಥಾನದ ಒಳಗೆ ಬಂದ

"ನಿನ್ನ ಪ್ರಿಯತಮನ ಸಮಾಗಮಕ್ಕೆ ಈ ದೇವಸ್ಥಾನವೇ ಆಗಬೇಕಾಗಿತ್ತೇ, ಬೇರೆ ಸ್ಥಳವಿರಲಿಲ್ಲವೇ ನಿನ್ನಿಂದ ಈ ಪವಿತ್ರ ಸ್ಥಳ ಅಶುದ್ಧವಾಯ್ತು ಎಲ್ಲಿ ತೋರಿಸು, ನಿನ್ನ ಆ ಪ್ರಿಯತಮನನ್ನು ಕೈ ಹಿಡಿದ ಗಂಡನಿಗೆ ವಂಚಿಸಿ ವೈರಾಗ್ಯದ ಸೋಗಿನಲ್ಲಿ ಅಪಚಾರ ನಡೆಸುತ್ತಿರುವೆಯೇನು ?''

"ನನ್ನ ಪ್ರಿಯತಮನ ಸಮಾಗಮಕ್ಕೆ ಇದೇ ಪಾವನವಾದ ಸ್ಥಳ ಅವನಿರುವಲ್ಲಿಗೇ ನಾನು ಬರಬೇಕೇ ವಿನಃ ಅವನು ನನ್ನ ಮನೆಬಾಗಿಲಿಗೆ ಬರುವಷ್ಟು ಪುಣ್ಯವಂತಳು ನಾನಲ್ಲ"

"ಬಹಳ ಎದೆಗಾರಿಕೆ ನಿಂದು ಅಷ್ಟಲ್ಲದೇ ಎಲ್ಲರೂ ಹೇಳುತ್ತಾರೇನು ?"

"ನಾನೇನು ಮಾಡಿದೆನೆಂದು ನೀವು ಹೇಳುತ್ತಿರುವುದು"

"ನಾನು ಅದನ್ನು ವಿವರಿಸಬೇಕೇ ಎಲ್ಲಿ ಆ ನಿನ್ನ ಪ್ರಿಯತಮ"

"ಓ ಅವನೇ ಅವನ ಬಗ್ಗೆ ನಿಮಗೆ ಶಂಕೆಯೇ ಇಗೋ ನೋಡಿ ಇವನೇ ನನ್ನ ಇನಿಯ"

ಗಿರಿಯಮ್ಮ ಎದುರಿಗಿದ್ದ ರಂಗನಾಥಸ್ವಾಮಿಯ ಮೂರ್ತಿಯನ್ನು ತೋರಿಸಿದಾಗ ತಿಪ್ಪರಸ ಸ್ಥಬ್ದನಾಗಿ ನಿಂತ

ತನಗೆ ಇಂದೇನು ಮಂಕು ಕವಿದಿತ್ತು ಗಿರಿಯಮ್ಮನ ಬಗ್ಗೆ ತನಗೆ ಸಕಲವೂ ತಿಳಿದಿದೆ ಅವಳು ಮಹಾಮಹಿಮಳು ಪರಮಾತ್ಮ ಅವಳಿಗೆ ಒಲಿದಿದ್ದಾನೆ ಎಂದು ತಿಳಿದೂ ತಾನು ಅನ್ಯಾಯವಾಗಿ ಅತ್ತಿಗೆಯ ಮಾತುಕೇಳಿ ಬರುವಂತಾಯಿತಲ್ಲಾ ಎಂದವನು ಲಜ್ಜೆಯಿಂದ ತಲೆಬಾಗಿ ಅಲ್ಲಿಂದ ಕದಲಿದಾಗ ಗಿರಿಯಮ್ಮನೇ ಅವನನ್ನು ಕೂಗಿ ಸ್ವಾಮಿಯ ಪಾದತಲದಲ್ಲಿದ್ದ ಹೂವನ್ನು ಅವನಿಗಿತ್ತು ನುಡಿದಿದ್ದಾಳೆ

"ನಿಮಗೆ ವಿವೇಕ ಹೇಳುವ ಅಧಿಕಾರ ನನಗಿಲ್ಲ ಆದರೆ ಮದುವೆಯಾದ ಹೆಂಡತಿ ನಿಮ್ಮಪಾಲಿಗಿಲ್ಲವಾದಾಗ ನಾನು ನಿಮಗೆ ಅನ್ಯಾಯ ಮಾಡಿದಂತೆ ನೀವು ಬೇರೆ ಲಗ್ನವಾಗಿ ಸುಖವಾಗಿರಿ ನನ್ನಿಂದ ನಿಮ್ಮ ಬಾಳು ಬರಿದಾಗಬಾರದು ನಮ್ಮ ವಂಶ ನಿಲ್ಲಬಾರದು"

ತಿಪ್ಪರಸ ಅವಳತ್ತ ನೋಡಿದಾಗ ಅವಳು ತನಗೆ ಆಶೀರ್ವಾದದೊಡನೆ ಉಪದೇಶ ಮಾಡಿದಂತೆ ಭಾಸವಾಯಿತವನಿಗೆ ಅವನು ತನ್ನ ಅನುಮಾನದ ಪ್ರಕೃತಿಗೆ ವ್ಯಥಿತನಾಗಿ ಅಲ್ಲಿಂದ ಕದಲಿದ

ಗಿರಿಯಮ್ಮ ತನ್ನ ಗಂಡ ಏಕಾಂಗಿಯಾಗಿರುವುದು ತನ್ನ ಅಪರಾಧದಿಂದ

ಎಂದು ಗ್ರಹಿಸಿ, ಅವನಿಗೆ ಮತ್ತೊಂದು ಮದುವೆ ಮಾಡುವಂತೆ ಅತ್ತೆ ಮಾವಂದಿರನ್ನು ಹುರಿದುಂಬಿಸತೊಡಗಿದಳು. ಅಲ್ಲದೆ ಆಗಾಗ್ಗೆ ಅವಳ ಅತ್ತೆ "ನಿನ್ನಿಂದ ತಿಪ್ಪರಸನ ಬಾಳು ಹಾಳಾಯ್ತು" ಎಂದು ಸೊಸೆಯನ್ನು ಮೂದಲಿಸುತ್ತಿದ್ದಳು. ಗಿರಿಯಮ್ಮ ಈ ಅಪಾದನೆಯಿಂದ ದುಃಖಿತಳಾಗಿದ್ದಾಳೆ.

ಆದರೆ ಎರಡನೇ ಮದುವೆ ಎಂದಾಕ್ಷಣ ತಿಪ್ಪರಸನಿಗೆ ಹೆಣ್ಣು ಕೊಡಲು ಎಷ್ಟೋ ಕನ್ಯಾದಾತೃಗಳು ಹಿಂದೆ ಸರಿಯತೊಡಗಿದರು. ಸಮಾಜದ ನಿಯಮವೇ ಇದು. ಎರಡನೆಯ ಮದುವೆ ಎಂದರೆ ವಯಸ್ಸಾದವನು ಎಂಬ ಭಾವನೆ ಜನರಿಗೆ. ಆದರೆ ತಿಪ್ಪರಸ ವಯಸ್ಸಾದವನಲ್ಲ. ಮಕ್ಕಳಿಲ್ಲದಿದ್ದರೂ ಮೊದಲನೇ ಹೆಂಡತಿ ಬದುಕಿದ್ದಾಳೆ ಎಂಬ ಒಂದೇ ಕಾರಣದಿಂದಾಗಿ, ತಿಪ್ಪರಸನಿಗೆ ನೋಡಿದ ಕನ್ಯಾದಾತೃಗಳು ಹಿಂದೆ ಸರಿಯತೊಡಗಿದಾಗ ಮತ್ತೆ ಆ ಅವಹೇಳನವನ್ನೂ ಅತ್ತೆಯ ಬಾಯಿಂದ ಗಿರಿಯಮ್ಮನೇ ಕೇಳುವಂತಾಯ್ತು.

"ಬದುಕಿದ್ದೂ ಗೋಳಾಡಿಸುತ್ತಾಳಲ್ಲಾ. ಇವಳು ಸತ್ತಿದ್ದರೇ ಚೆನ್ನಾಗಿತ್ತು. ಮೊದಲನೇ ಹೆಂಡತಿ ಬದುಕಿದ್ದಾಳೆ ಎಂಬ ಪ್ರಶ್ನೆ ಮೇಲೇಳುತ್ತಿರಲಿಲ್ಲ."

ಅತ್ತೆಯ ಕಟುನುಡಿಗಳು ಗಿರಿಯಮ್ಮನ ಕಿವಿ ಮುಟ್ಟಿದಾಗ ಅವಳು ಅತ್ಯಂತ ದುಃಖದಿಂದ ಕೂಡಿದವಳಾಗಿ ತಾನೇ ಗಂಡನಿಗೆ ಕನ್ಯೆಯನ್ನು ಹುಡುಕ ತೊಡಗಿದಳು.

ಯಾರು ಏನೇ ಹೇಳಿದರೂ ಗಿರಿಯಮ್ಮನ ಮೇಲೆ ತಿಪ್ಪರಸನ ಭಕ್ತಿ ದಿನೇ ದಿನೇ ಅಧಿಕವಾಯ್ತು. ಅವಳೆದುರಿಗೆ ಓಡಿಯಾಡುವುದಕ್ಕೇ ನಾಚುತ್ತಿದ್ದ. ಅವಳು ಬಡಿಸಲು ಬಂದರೆ, ಅವಳಾಗಿ ಮಾತನಾಡಿಸಿದರೆ ಮಾತನಾಡುತ್ತಿದ್ದ. ಲೋಕದಲ್ಲಿ ಪತಿಭಕ್ತಿಯನ್ನು ಮಾಡುವ ಸತಿಯರ ಚರಿತ್ರೆಗಳಲ್ಲಿ ಸಾವಿತ್ರಿ, ಸೀತ, ದಮಯಂತಿ ಮುಂತಾದವರಾದರೆ, ಸತಿಭಕ್ತಿ ಉದಾಹರಣೆಗೆ ತಿಪ್ಪರಸನಾದನು.

ಗಂಡನ ವೈರಾಗ್ಯವನ್ನು ನೋಡಿ ಗಿರಿಯಮ್ಮನಿಗೆ ನುಂಗಲಾರದ ತುತ್ತಾಯಿತು. ಗಂಡನನ್ನೇ ವಶಮಾಡಿಕೊಂಡು, ಅಂಗೈಲಿಟ್ಟುಕೊಂಡು ಆಡಿಸುತ್ತಿದ್ದಾಳೆ ಎನ್ನುವ ವ್ಯಂಗ್ಯ ನುಡಿಗಳು ವಾರಗಿತ್ತಿಯ ಬಾಯಿಂದ ಬಂದ ಮೇಲಂತೂ ಅವಳಿಗೆ ಗಂಡನ ಮದುವೆ ಮಾಡಲೇಬೇಕೆಂಬ ಹಠ ಉಂಟಾಯಿತು. ತಾನೇ ಅವರಿವರಿಗೆ ಹೇಳಿ ಉತ್ತಮಳಾದ ಕನ್ಯೆಯೊಬ್ಬಳನ್ನು ಹುಡುಕಿ ವಿವಾಹದ ಖರ್ಚಿಗಾಗಿ ದೇವಸ್ಥಾನದ

ಚಕ್ತರಿಂದ ಕಾಣಿಕೆ ವಸ್ತ್ರಗಳನ್ನು ಪಡೆದು ತಿಪ್ಪರಸನ ಮದುವೆ ತನ್ನ ನೇತೃತ್ವದಲ್ಲೇ ನಡೆಸಿದಳು ತನ್ನ ವಿವಾಹ ಕಾಲದಲ್ಲಿ ಕೊಟ್ಟಿದ್ದ ಅತ್ತೆ—ಹಾಗೂ ತವರುಮನೆಯ ಒಡವೆಗಳನ್ನೆಲ್ಲಾ ತನ್ನ ತಂಗಿಗೆ ಬಳುವಳಿಯಾಗಿ ನೀಡಿದಳು ಯಾರೇ ದೂರಿದರೂ ತನ್ನ ಪರವಾಗಿ ಮಾತನಾಡಿ ತನ್ನ ಮಾರ್ಯದೆ ರಕ್ಷಣೆ ಮಾಡುವ ಪತಿಯ ಪಾದಗಳಿಗೆ ಗಿರಿಯಮ್ಮ ನಮಸ್ಕರಿಸಿದಾಗ ಅವನ ಕಣ್ಣಿಳಿಂದ ಧಾರಾಕಾರವಾಗಿ ನೀರು ಹರಿಯತೊಡಗಿತು

ಗಂಡನಿಗೆ ಮರುಮದುವೆಯಾದ ನಂತರ ಅವಳಿಗೆ ಮತ್ತೂ ಸಮಾದಾನವಾಯಿತು ಗಂಡನ ಕ್ಷೇಮಸಮಾಚಾರವನ್ನು ನೋಡಿಕೊಳ್ಳುವ ತಂಗಿ ಬಂದ ಮೇಲೆ ಅವಳ ಪೂಜೆ ಪುನಸ್ಕಾರಗಳಿಗೆ ಮತ್ತೂ ಅವಕಾಶ ಸಿಕ್ಕಿತು

ಅಳುವ ಮಕ್ಕಳು ಗಿರಿಯಮ್ಮ ಮುಟ್ಟಿದರೆ ಕಿಲ ಕಿಲ ನಗುವುವು ಆಕೆಯ ಕರಸ್ಪರ್ಶವಾದರೆ ಜ್ವರದ ಬೇನೆ ಹರಿಯುವುದು, ಗಿರಿಯಮ್ಮನ ನೋಟಮಾತ್ರ ದಿಂದಲೇ ತಾವು ದನ್ಯರು ಎಂಬುವಷ್ಟು ಮಟ್ಟಿಗೆ ಅವಳ ಪ್ರಭಾವ ಊರಲ್ಲೆಲ್ಲಾ ಹರಡಿತು ರಂಗನಾಥಸ್ವಾಮಿಯ ದರುಶನಕ್ಕೆ ಬರುವವರೆಲ್ಲಾ ಗಿರಿಯಮ್ಮನ ಬಕ್ತಾದಿಗಳಾದರು ಅವಳು ಹೇಳುವುದೇ ಅವರಿಗೆ ವೇದವಾಕ್ಯ ಗಿರಿಯಮ್ಮ ಬವಿಷ್ಯ ಹೇಳತೊಡಗಿದಳು ಅದನ್ನು ಕೇಳಿ ಅಲ್ಲಿಗೆ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಬಂದವರೆಷ್ಟೋ ಒಟ್ಟಿನಲ್ಲಿ ಗಿರಿಯಮ್ಮ ಸೂಚಿಸುತ್ತಿದ್ದ ಪರಿಹಾರಗಳು ವ್ಯರ್ಥವಾಗುತ್ತಿರಲಿಲ್ಲ ಇದೇ ಕಾರಣದಿಂದಾಗಿ ಹೆಳವನಕಟ್ಟೆಗೆ ಬರುವ ಹೆಂಗಸರು ಬಹಳವೇ ಆದರು

ರಂಗನಾಥಸ್ವಾಮಿಯ ಭಕ್ತಾದಿಗಳೆಲ್ಲಾ ಗಿರಿಯಮ್ಮನ ಬಕ್ತರಾದರು ಭಕ್ತಾದಿಗಳು ಗಿರಿಯಮ್ಮನ ಬಳಿ ತಮ್ಮ ಸಮಸ್ಯೆಗಳ ಪರಿಹಾರ ಪಡೆಯುವಾಗ ಸುಮ್ಮನೇ ಬರಿಗೈಲಿ ಬರುತ್ತಿರಲಿಲ್ಲ ಅವರುಗಳು ನೀಡುತ್ತಿದ್ದ ಕಾಣಿಕೆಯಿಂದ ಗಿರಿಯಮ್ಮನಿಗೇನೂ ಉಪಯೋಗವಿಲ್ಲವಾದರೂ ಅವರ ಮನೆಯವರಿಗೆಲ್ಲಾ ಅನುಕೂಲವಾಗಿತ್ತು ಗಿರಿಯಮ್ಮನ ಅತ್ತೆಗೆ ಮತ್ತು ವಾರಗಿತ್ತಿಗೆ ಅವಳ ಮೇಲೆ ಅಸೂಯೆ ಹಾಗೂ ದ್ವೇಷವೇ, ಆದರೂ ಅವಳಿಂದ ಬಂದ ಆದಾಯವನ್ನು ಅವರು ಸಂತೃಪ್ತಿಯಿಂದ ಅನುಭವಿಸುತ್ತಿದ್ದರು

*        *        *        *

ಒಂದು ದಿನ, ಅಂದು ಗಿರಿಯಮ್ಮ ದೇವಸ್ಥಾನಕ್ಕೆ ನಸುಕಿನಲ್ಲೇ ಎದ್ದು ಹೊರಟಿದ್ದಾಳೆ ಕೆರೆಯಲ್ಲಿ ಮಿಂದು, ಹೂವು ಪತ್ರಗಳನ್ನು ಸಂಗ್ರಹಿಸಿ, ದೇವಸ್ಥಾನದ ಮುಂದೆ ಸಾರಿಸಿ, ಬಲು ಅಂದವಾಗಿ ಗೋಪಾಲಕೃಷ್ಣನ ಚಿತ್ರವನ್ನು ರಚಿಸಿದಳು ರಂಗೋಲಿಯ ಅಂದವನ್ನು ನೋಡಿ ಅವಳು ಪದೇ ಪದೇ ಹಿಗ್ಗಿ ಇನ್ನೇನು ಪೂಜೆಗೆ ಹೊರಡಬೇಕೆನ್ನುವ ವೇಳೆಗೆ ಅದೇ ಮಾರ್ಗವಾಗಿ ಉಡುಪಿಗೆ ಹೊರಟಿದ್ದ ಗೋಪಾಲದಾಸರು ತಮ್ಮ ಶಿಷ್ಯರೊಡಗೂಡಿ ಆಕಸ್ಮಿಕವಾಗಿ ಅಲ್ಲಿಗೆ ಬಂದಾಗ, ಗಿರಿಯಮ್ಮ ಅವರನ್ನು ಸ್ವಾಗತಿಸಿ ನಮಸ್ಕರಿಸಿದಳು ದಾಸರು ರಂಗೋಲಿಯ ಗೋಪಾಲಕೃಷ್ಣನನ್ನು ನೋಡಿ ಸಂತುಷ್ಟರಾದರು

"ಅಮ್ಮ ಚಿತ್ರ ತುಂಬಾ ಚೆನ್ನಾಗಿದೆ ಇದರ ಮೇಲೇ ಈವತ್ತು ನಮ್ಮ ಪೂಜೆ"

"ಅದಕ್ಕೆ ಚಿತ್ರಿಸಿದೆ" ಎಂದುತ್ತರಿಸಿದಳು ಗಿರಿಯಮ್ಮ ಅವಳ ಮಾತು ಕೇಳಿ ಅಲ್ಲಿದ್ದವರಿಗೆಲ್ಲಾ ವಿಚಿತ್ರವೆನ್ನಿಸಿತು ಹಾಗಾದರೆ ಗಿರಿಯಮ್ಮನಿಗೆ ದಾಸರ ಆಗಮನದ ಸೂಚನೆ ತಿಳಿದಿತ್ತೇ ಎಂದವರ ಶಂಕೆ

ದಾಸರ ಸ್ನಾನ, ಆಹ್ನಿಕಗಳಾದವು ಅವರು ಪೂಜೆಗೆ ಕುಳಿತಾಗ ಗಿರಿಯಮ್ಮ ದೇವರ ನೈವೇದ್ಯಕ್ಕಾಗಿ ತಾನೇ ವಿವಿಧ ಪಕ್ವಾನ್ನಗಳನ್ನು ಮಾಡಿ ತಂದಿಟ್ಟಳು

ಶ್ರೀಮಧ್ವಾಚಾರ್ಯರಿಂದ ರಚಿತವಾದ ದ್ವಾದಶ ಸ್ತೋತ್ರದ ಎರಡು ಅಧ್ಯಾಯಗಳನ್ನು ಪಠಿಸಿ, ಶ್ರೀಗಳವರು ಮಹಾನೈವೇದ್ಯ ಮಾಡಿದರು ಗಿರಿಯಮ್ಮನ ಸುಕೃತ ವಿಶೇಷದಿಂದ "ವಂದೇ ವಂದ್ಯಂ" ಎಂದು ಶ್ರೀ ದ್ವಾದಶ ಸ್ತೋತ್ರವನ್ನು ದಾಸರು ಪ್ರಾರಂಭಿಸುವಾಗಲೇ ಅವಳಿಗೆ ಗೋಪಾಲಕೃಷ್ಣನ ದಿವ್ಯ ರೂಪ ದರ್ಶನವಾಯಿತು ಗಿರಿಯಮ್ಮ ದಾಸರತ್ತ ನೋಡಿದಾಗ ಅವರೂ ಅವಳತ್ತ ನೋಡಿದರು ಗಿರಿಯಮ್ಮನ ಭಕ್ತಿಗೆ ಮೆಚ್ಚಿದ ದಾಸರು, ಆನಂದಿತರಾಗಿ ಅವಳಿಗೆ ಬಾಲಗೋಪಾಲನ ವಿಗ್ರಹವಿತ್ತು,

"ಗಿರಿಯಮ್ಮ, ಹಿಂದೊಮ್ಮೆ ನೀನು ಬಾಲ್ಯದಲ್ಲಿ ನಿನ್ನ ರಂಗೋಲಿಯ ಚಿತ್ರದಿಂದ ನಮ್ಮನ್ನಾಕರ್ಷಿಸಿದ್ದೆ ಹೆಳವನಕಟ್ಟೆ ರಂಗನಾಥಸ್ವಾಮಿಯ ದಯದಿಂದ, ನೀನು ಅನೇಕ ದೇವರನಾಮಗಳನ್ನು "ಹೆಳವನಕಟ್ಟೆ ರಂಗ"ನ ಅಂಕಿತದಲ್ಲೇ ರಚಿಸುವಂತಾಗಲಿ ಎಂದು ಅನುಗ್ರಹಿಸಿದ್ದೆವು ಅದು ಇಂದು ನಿಜವಾಗಿದೆ ನಿನ್ನಿಂದ

ಇನ್ನೂ ಅನೇಕ ದೇವರನಾಮಗಳು ದೇವರ ಅಂಕಿತದಲ್ಲೇ ರಚಿತವಾಗಲಿ, ಲೋಕಕಲ್ಯಾಣಕ್ಕಾಗಿಯೇ ಅವತರಿಸಿರುವ ಮಹಾಮಹಿಮಳು ನೀನು'' ಎಂದು ಆಶೀರ್ವದಿಸಿದರು

ಅಂದಿನಿಂದ ಗಿರಿಯಮ್ಮನಿಗೆ ಭಗವಂತನ ವಿವಿಧ ಲೀಲಾ ವಿಭೂತಿಗಳ ದರುಶನಕ್ಕೆ ಪ್ರಾರಂಭವಾಯಿತು ಅಲ್ಲದೆ ಸಮಯಸ್ಫೂರ್ತಿ ತಂದುಕೊಂಡು ಗಿರಿಯಮ್ಮ ತನ್ನ ಮುಂದಿನ ಕೀರ್ತನೆಗಳನ್ನೆಲ್ಲಾ "ಹೆಳವನಕಟ್ಟೆ ರಂಗ'' ಎಂಬ ಅಂಕಿತದಿಂದಲೇ ರಚಿಸತೊಡಗಿದಳು

ಪ್ರತಿದಿನವೂ ಬೆಳಗ್ಗೆ ಎಂದಿನಂತೆ ಬೇಗನೆ ಎದ್ದು ಶುದ್ಧಳಾಗಿ ಗೋಪಾಲ ದಾಸರು ಕೊಟ್ಟ ಪ್ರತೀಕದ ಪೂಜೆ ಮಾಡಿ ಅನಂತರ ತನ್ನ ಕೆಲಸಗಳನ್ನು ಬೇಗ ಪೂರೈಸಿ ದೇವಸ್ಥಾನಕ್ಕೆ ಮೊಸರು ಕಡೆಯಲು ಹೋಗುತ್ತಿದ್ದಳು. ಗಿರಿಯಮ್ಮ ಅಲ್ಲಿ ಜನರೇ ತಂದಿತ್ತ ಮೊಸರನ್ನು ಭಾಂಡೆಯಲ್ಲಿ ಹಾಕಿ ಕಡೆಯುತ್ತಾ ಪರಮಾತ್ಮನನ್ನು ಸ್ತುತಿಸುತ್ತಾ ಕುಳಿತಿರುತ್ತಿದ್ದರೆ, ಸಾಕ್ಷಾತ್ ಆ ಪರಮಾತ್ಮನೇ ಹಿಂದಿನಿಂದ ಶಿಶುರೂಪದಲ್ಲಿ ಪ್ರತ್ಯಕ್ಷನಾಗಿ ಗಿರಿಯಮ್ಮನಿಂದ ಬೆಣ್ಣೆ ಬೇಡಿ ತಿಂದು ಜಿಡ್ಡಿನ ಕೈಗಳನ್ನು ಅವಳ ಸೆರಗಿಗೆ ಒರಸಿಕೊಂಡೋಡುತ್ತಿದ್ದನೆಂದ ಮೇಲೆ ಅವಳ ಭಕ್ತಿ ಭಗವಂತನಲ್ಲಿ ಅಪಾರವೆಂಬುದಕ್ಕೆ ಬೇರೇ ನಿದರ್ಶನವೇ ಬೇಕಿಲ್ಲ ಹೀಗೆ ಪ್ರತಿದಿನವೂ ನಡೆಯುತ್ತಿರಲಾಗಿ, ಗಿರಿಯಮ್ಮನಿಗೆ ಕೃಷ್ಣ ದರ್ಶನ ನೀಡಿದನಂತೆ ಎಂಬ ವಿಷಯ ಎಲ್ಲರಿಗೂ ಹರಡಿತ್ತು

"ಎಲ್ಲಾ ಬರೀ ಸುಳ್ಳು ಇವಳು ದೇವಲೋಕದ ಕನ್ಯೆಯೇ ಇಲ್ಲಾ ರಂಬೆಯೋ, ಇವಳ ಗಾಯನ ನರ್ತನಕ್ಕೆ ಮೆಚ್ಚಿ ದೇವರೇ ಪ್ರತ್ಯಕ್ಷರಾಗಲಿಕ್ಕೆ'' ಎಂದರು ಅವಳ ಅತ್ತೆ ವಾರಗಿತ್ತಿಯರು

ಗಿರಿಯಮ್ಮನ ಸತ್ವಪರೀಕ್ಷೆ ನಡೆಸಲು ಕೃಷ್ಣಪ್ಪನವರನ್ನು ಪ್ರೇರೇಪಿಸಿದಳು ಗಿರಿಯಮ್ಮನ ಅತ್ತೆ

ಎಂದಿನಂತೆ ಗಿರಿಯಮ್ಮ ನಸುಕಿನಲ್ಲೇ ಎದ್ದು ತನ್ನ ಪಾಲಿನ ಕೆಲಸಗಳನ್ನೆಲ್ಲಾ ಪೂರೈಸಿಕೊಂಡು ರಂಗನಾಥಸ್ವಾಮಿ ದೇವಸ್ಥಾನಕ್ಕೆ ಹೊರಟಿದ್ದಾಳೆ ದೇವರ ಮುಂದೆ ನಿಂತು ಹಾಡು ಹಾಡಿ ನರ್ತಿಸಿ ದೇವರ ಪೂಜೆ ಮುಗಿಸಿದ್ದಾಳೆ ಭಕ್ತರು ಆಗಗಾಲೇ

ತಂದು ಬಾಂಡೆಯಲ್ಲಿ ಹಾಕಿದ್ದ ಮೊಸರನ್ನು ಕಡೆಯಲು ಕುಳಿತು ಕಣ್ಮುಚ್ಚಿ ಪರಮಾತ್ಮನ ನಾಮಕೀರ್ತನೆ ಆರಂಬಿಸಿದ್ದಾಳೆ ಅವಳ ಇಂಪಾದ ಮಧುರ ಸ್ವರಕ್ಕೆ, ಮೋಡಿ ಹಾಕಿದ ಸರ್ಪದಂತೆ, ಬಾಲಗೋಪಾಲ ತನ್ನ ಶಿಶುರೂಪದಲ್ಲಿ ಅವಳಿಗೆ ದರುಶನ ನೀಡುತ್ತಿದ್ದಾನೆ ಅವನ ಕಾಲ್ಗೆಜ್ಜೆಯ ನಾದವೇ ಗಿರಿಯಮ್ಮನ ಸಂಗೀತಕ್ಕೆ ತಾಳಹಾಕಿದಂತಿದೆ

ಗಿರಿಯಮ್ಮನ ಸತ್ವಪರೀಕ್ಷೆ ನಡೆಸಲು ಅವಳಿಗರಿವಿಲ್ಲದಂತೆಯೇ ಅವಳನ್ನ ನುಸರಿಸಿ ದೇವಸ್ಥಾನಕ್ಕೆ ಬಂದು ಮರೆಯಲ್ಲಿ ನಿಂತು ಅವಳ ಚಲನವಲನಗಳನ್ನೆ ವೀಕ್ಷಿಸುತ್ತಿದ್ದ ಕೃಷ್ಣಪ್ಪನವರಿಗೆ ಕೃಷ್ಣನ ಕಿರುಗೆಜ್ಜೆಯ ನಾದ ಮಾತ್ರ ಕೇಳಿಬಂದು ಪರಮಾತ್ಮನ ದಿವ್ಯಸ್ವರೂಪವನ್ನು ನೋಡಲು ಅವರು ಶಕ್ತರಲ್ಲದ ಕಾರಣ ಅಪೂರ್ವವಾದ ತೇಜಸ್ಸೊಂದು ಅವರಿಗೆ ಗೋಚರವಾಗಿ, ಆ ತೇಜಸ್ಸನ್ನು ನೋಡಲೂ ಅಶಕ್ತರಾಗಿ ಅವರೇ ಮೂರ್ಛೆಗೊಂಡು ಕೆಳಗೆ ಬಿದ್ದವರಾದರು ಗಿರಿಯಮ್ಮ ತನ್ನ ಕೆಲಸ ಮುಗಿಸಿ ಮೇಲೆದ್ದಾಗ ದೇವಸ್ಥಾನದ ಕಂಭದ ಮರೆಯಲ್ಲಿ ತನ್ನ ಮಾವನವರು ಬಿದ್ದಿರುವುದು ಅವಳಿಗೆ ಗೋಚರವಾಯ್ತು

ಅವಳಿಗೆ ಸಕಲ ವಿಷಯವು ಅರ್ಥವಾಗಿದೆ ಅವಳೇ ಮಾವನವರನ್ನು ಮೇಲೆಬ್ಬಿಸಿ ಸಮಾಧಾನ ಹೇಳತೊಡಗಿದ್ದಾರೆ "ಮಾವನವರೇ ಆದದ್ದಾಯಿತು ಸಮಾಧಾನತಂದುಕೊಳ್ಳಿ ಪರಮಾತ್ಮನ ದಿವ್ಯದರುಶನದ ಲಾಬ ಸುಮ್ಮನೇ ಯಾರಿಗೂ ಆಗುವುದಿಲ್ಲ ನೀವೇ ಧನ್ಯರು "ಪರಮಾತ್ಮನ ತೇಜಸ್ಸನ್ನು ನೋಡಿದ್ದೀರಿ ''

"ಗಿರಿಯಮ್ಮ ನನ್ನನ್ನು ಕ್ಷಮಿಸಮ್ಮಾ ತಾಯಿ ನೀನು ಮಹಾಭಾಗವದ್ಭಕ್ತೆಯೆಂದು ತಿಳಿದೂ ನಿನ್ನನ್ನು ಪರೀಕ್ಷಿಸಲು ಬಂದೆ, ನನ್ನಿಂದ ತಪ್ಪಾಯಿತು ''

ಕೃಷ್ಣಪ್ಪನವರೇ ಸೊಸೆಗೆ ಕೈ ಮುಗಿದು ನಿಂತರು ಕಣ್ಣೀರು ಹರಿಸುತ್ತ ಅವರು ಮನೆಗೆ ಹಿಂತಿರುಗಿದಾಗ ಅವರಿಗೆದುರಾದ ಅವರ ಪತ್ನಿಯನ್ನು ನೋಡಿ ಅವರಿಗೆ ವಿಪರೀತ ಕೋಪವುಕ್ಕಿ ಬಂತು

ಹೆಂಡತಿ ಪ್ರೇರೇಪಣೆಯಿಂದಲ್ಲವೇ ತಮಗೆ ಈ ಅವಕಾಶ ಲಭಿಸಿದ್ದು ಎನ್ನಿಸಿತವರಿಗೆ

ಆದರೂ ಸಮಾಧಾನ ಚಿತ್ತರಾಗಿ ಹೆಂಡತಿಯ ಮುಂದೆ ನುಡಿದರು

"ನಿನ್ನ ಮಾತಿನಿಂದ ನನಗೆ ಬಹಳ ಅನುಕೂಲವಾಯಿತು ಇಲ್ಲದಿದ್ದಲ್ಲಿ ಈ ಅವಕಾಶ ನನಗೆ ಲಭಿಸುತ್ತಿತ್ತೇ ''

"ಹಾಗಾದರೆ ನಾನು ಹೇಳಿದ್ದು ಸರಿತಾನೇ ಗಿರಿಯಮ್ಮನದೆಲ್ಲಾ ಬೂಟಾಟಿಕೆ ಎಂದೇ ನನಗೆ ಎಂದೋ ತಿಳಿದಿತ್ತು ಸೊಸೆಯನ್ನು ವಹಿಸಿಟ್ಟುಕೊಂಡು ಮಾತನಾಡುತ್ತಿದ್ದಿರಲ್ಲಾ ಈಗರ್ಥವಾಯಿತೇ ಅವಳ ಬಂಡವಾಳ ''

"ಖಂಡಿತವಾಗಿ''

ಅಲ್ಲಿಗೆ ಆದೇ ವೇಳೆಗೆ ಬಂದ ಹಿರಿ ಸೊಸೆಯ ಮುಂದೆ ಗಿರಿಯಮ್ಮನ ಅತ್ತೆ ನುಡಿದಳು

"ಕೇಳಿದಿಯೇನು ? ಗಿರಿಯಮ್ಮನ ವಿಷಯ ಕೇಳು ಹೇಳ್ತಾರೆ ನಿಮ್ಮಾವನವರೇ, ಸೊಸೆಯನ್ನು ಹೊಗಳುತ್ತಿದ್ದರಲ್ಲಾ ಈಗರ್ಥವಾಯಿತೇನೋ ''

ಶ್ಯಾನುಭೋಗ ಕೃಷ್ಣಪ್ಪನವರೇ ಗಂಬೀರವಾಗಿ ನುಡಿದರು "ಈವತ್ತು ನಿಮ್ಮಿಂದಾಗಿ ನನಗೆ ಒಳ್ಳೇ ಅವಕಾಶ ಸಿಕ್ಕಿತು ಗಿರಿಯಮ್ಮ ಹಾಡುತ್ತಾ ಮೊಸರು ಕಡಿಯುತ್ತಿದ್ದರೆ ಬಾಯಲ್ಲಿ ವರ್ಣಿಸಲಸಾಧ್ಯ ಆ ಪರಮಾತ್ಮನೇ ಅವಳಿಗೆ ದರುಶನ ನೀಡ್ತಾನೆ ''

ವಾರಗಿತ್ತಿಯ ಅವಹೇಳನ ಕೇಳಲು ನಿಂತಿದ್ದ ಹಿರಿಯ ಸೊಸೆಗೆ ಮಾವನವರ ಮಾತಿನಿಂದ ತಬ್ಬಿಬ್ಬಾಯಿತು

"ಮಾವಯ್ಯ ನೀವು ಹೇಳುತ್ತಿರುವುದೇನು ? ಗಿರಿಯಮ್ಮನಿಗೆ ?''

"ಹೌದು ಗಿರಿಯಮ್ಮ ಮಹಾಸಾಧ್ವಿ. ಪರಮಾತ್ಮನ ಭಕ್ತಳು ಅವಳಿಗೆ ಗೋಚರಿಸಿದ ಪರಮಾತ್ಮನ ದಿವ್ಯ ತೇಜಸ್ಸೇ ನನ್ನಿಂದ ನೋಡಲಾಗಲಿಲ್ಲ ಅಂದಮೇಲೆ ದೇವರೇ ಅವಳಿಗೆ ಗೋಚರವಾಗುತ್ತಾನೆಂದ ಮೇಲೆ ಅವಳು ಸಾಮಾನ್ಯಳೇ ನೀವು ಮೂರ್ಖರು ಅವಳ ಮಹಿಮೆಯನ್ನೇ ಅರ್ಥಮಾಡಿಕೊಂಡಿಲ್ಲ ಮಾಡಿಕೊಳ್ಳುವ ಯೋಗ್ಯತೆಯೂ ನಿಮಗಿಲ್ಲವೆಂದು ನಾನು ಬಲ್ಲೆ ''

ಕೃಷ್ಣಪ್ಪನವರ ಮಾತಿನಿಂದ ಅತ್ತೆ ಸೊಸೆಯರ ಕಿಚ್ಚು ಗಿರಿಯಮ್ಮನ ಮೇಲೆ ಹೆಚ್ಚಾಯಿತು

ಆದರೆ ಆವಳ ಬಗ್ಗೆ ಪರೀಕ್ಷೆನಡೆಸುವ ತಮ್ಮ ಪ್ರಯತ್ನವನ್ನು ಸಡಿಲಗೊಳಿಸಿದರು

* * * *

ಗಿರಿಯಮ್ಮನ ಅದ್ಭುತ ಶಕ್ತಿಯನ್ನು ಜನ ನಾನಾ ವಿಧವಾಗಿ ಪ್ರಶಂಸಿಸುತ್ತಿದ್ದರು ಹೆಳವನಕಟ್ಟೆಯಲ್ಲೇ ತನ್ನ ದಿನದ ಬಹುಭಾಗವನ್ನು ಕಳೆಯುತ್ತ, ಹೆಳವನಕಟ್ಟೆ ರಂಗನ ಅಂಕಿತದಲ್ಲಿ ದೇವರನಾಮಗಳನ್ನು ರಚಿಸುವ ಗಿರಿಯಮ್ಮ ಎಲ್ಲರಿಗೂ ಹೆಳವನಕಟ್ಟೆ ಗಿರಿಯಮ್ಮನಾದಳು

ಯಾರ ಮನೆಯಲ್ಲಿ ಹೊಸ ಒಡವೆ ಸೀರೆಗಳು ತರಲಿ, ಮದುವೆ ಮುಂಜಿಗಾಗಿ ಜವಳಿ ತರಲಿ ಅದನ್ನು ಮೊದಲು ಗಿರಿಯಮ್ಮ ಸ್ಪರ್ಶಿಸಿಕೊಡಬೇಕು ಯಾರ ಮನೆಯಲ್ಲಿ ಜ್ವರ ರೋಗ ರುಜಿನಾದಿಗಳು ಬರಲಿ, ಗಿರಿಯಮ್ಮ ದೇವರ ಸ್ಮರಣೆಮಾಡಿದ ಮಾತ್ರದಿಂದ ಅವರ ಸಕಲ ಖಾಯಿಲೆಗಳೂ ಹೆಸರಿಲ್ಲದಂತೆ ಹೋಗುತ್ತಿದ್ದವು ಅವಳು ಜನಪ್ರಿಯತೆ ಗಳಿಸುವುದನ್ನು ಕಂಡು ಅವಳ ಗಂಡ ತಿಪ್ಪರಸ ಹೆಮ್ಮೆಪಡುತ್ತಿದ್ದ ಅವಳು ದೇವತೆಯೆಂದು ಮನದಲ್ಲೇ ಅವಳನ್ನು ಪೂಜಿಸುತ್ತಿದ್ದ ಇದರಿಂದಾಗಿ ಗಿರಿಯಮ್ಮನ ಅತ್ತೆಗೆ ಸೊಸೆಯ ಮೇಲೆ ಕೋಪ ಮೊದಲ ಹೆಂಡತಿಯಿಂದ ಸಂಸಾರಮಾಡಲಾರದೆ ಮರುಮದುವೆಯಾದ ಮಗ ಗಿರಿಯಮ್ಮನನ್ನೇ ಆರಾಧಿಸುವಂತಾದುದೇ ಅವಳಿಗೆ ಅವಮಾನವೆಂದು ಬಗೆದಿದ್ದಳವಳು

ಅಂದು ರಾತ್ರಿಯಾಗಿದೆ ರಾತ್ರಿಯ ಅಡಿಗೆ ಗಿರಿಯಮ್ಮನೇ ಮಾಡುವ ಸರದಿ ಅಂದು ನೆಂಟರು ಬೇರೆ ಬಂದಿದ್ದಾರೆ, ಗಿರಿಯಮ್ಮ ಅಡುಗೆಗಾಗಿ ಸಿದ್ಧತೆ ನಡೆಸಲು ಅಡಿಗೆಮನೆಯೊಳಗೆ ಬಂದಳು ಅಡಿಗೆಗೆ ಮುಖ್ಯವಾಗಿ ಬೇಕಾಗಿದ್ದ ಸೌದೆಯೇ ಮುಗಿದು ಹೋಗಿರುವುದು ಅವಳಿಗೆ ಗೋಚರಿಸಿತು

ಸೌದೆಯಿಲ್ಲದೆ ಇಷ್ಟು ಜನಕ್ಕೆ ಅಡಿಗೆಯಾಗುವುದು ಹೇಗೆಂದು ಯೋಚಿಸುತ್ತಾ ಅವಳು, ಅಂಗಳದಲ್ಲಿ ಕುಳಿತು ಮನೆಗೆ ಬಂದ ನೆಂಟರಿಷ್ಟರೊಡನೆ ಮಾತನಾಡುತ್ತಿದ್ದ ಅತ್ತೆಯ ಬಳಿಗೆ ಬಂದವಳೇ ಅವಳಿಗೆ ವಿಷಯ ತಿಳಿಸಿದಳು

"ಅತ್ತೆಯವರೇ ರಾತ್ರಿಯ ಅಡಿಗೆಗಾಗಿ ಸೌದೆ ಮುಗಿದುಹೋಗಿದೆ '' ಅವಳ ಅತ್ತೆಗೆ ಮೊದಲೇ ಗಿರಿಯಮ್ಮನ ಮೇಲೆ ದ್ವೇಷ. ಅಲ್ಲದೆ ಮಾತಿನ ಮಧ್ಯೆ ಪ್ರವೇಶಿಸಿದಳೆಂದು ಕೋಪ "ಕಟ್ಟಿಗೆ ಇಲ್ಲವಾದರೆ ಈಗ ಹೇಳುವುದೇ ಮೊದಲೇ ತಿಳಿಸಬಾರದಿತ್ತೆ ? ತಿಳಿಸಿದ್ದರೆ ನಾಲಿಗೆ ಬಿದ್ದುಹೋಗುತ್ತಿತ್ತೇ ? ಅಥವಾ ಸೌದೆ ಇದೆಯೋ ಇಲ್ಲವೋ ಎಂದು ನೋಡಲು ಕಣ್ಣುಗಳು ಕುರುಡಾಗಿದ್ದವೇ ? ಸದಾಕಾಲ ಶ್ರೀರಂಗನೆಂದು ಕುಳಿತಿದ್ದರೆ ಮನೆಯ ಕೆಲಸ ಸಾಗೀತೇ ಈ ರಾತ್ರಿಯಲ್ಲಿ ಎಲ್ಲಿ ಹೋಗಿ ಕಟ್ಟಿಗೆ ತರುವುದು ಹೋಗು ನನಗೇನೂ ಹೇಳಬೇಡ ಒಟ್ಟಿನಲ್ಲಿ ಅಡಿಗೆ ಮಾಡಿದರೆ ಸರಿ ಕಟ್ಟಿಗೆ ಇಲ್ಲವಾದರೆ ನಿನ್ನ ಕಾಲುಗಳನ್ನೇ ಒಲೆಯಲ್ಲಿಟ್ಟು ಅಡಿಗೆ ಮಾಡಿ ಮುಗಿಸು "ಆಗ ನಿನ್ನ ಶ್ರೀರಂಗ ಎಲ್ಲಿಂದ ಬಂದು ರಕ್ಷಿಸುತಾನೋ ನೋಡೋಣ''

ಅತ್ತೆಯ ಕಟುನುಡಿಗಳನ್ನು ಕೇಳಿದ ಗಿರಿಯಮ್ಮನ ಮನಸ್ಸು ಸ್ವಲ್ಪವೂ ವಿಚಲಿತವಾಗಲಿಲ್ಲ ಕಾರಣ ಅತ್ತೆಯ ಯೋಗ್ಯತೆಯನ್ನರಿತಿದ್ದ ಅವಳಿಗೆ, ಅತ್ತೆಗೆ ಏನು ಹೇಳಿದರೂ ತಿಳುವಳಿಕೆಬಾರದೆಂದು ತಿಳಿದಿತ್ತು

ಗಿರಿಯಮ್ಮ ಅಡಿಗೆ ಮನೆ ಬಾಗಲಿಗೆ ಬರುವುದಕ್ಕೂ ಅವಳನ್ನು ಹಿಂಬಾಲಿಸಿ ಬಂದ ಅವಳ ಅತ್ತೆ ಸೊಸೆಯ ಮುಂದಲೆಯನ್ನು ಹಿಡಿದೆಳೆದು ಗದ್ದರಿಸಿದಳು

"ಮನೆಗೆ ಬಂದ ನೆಂಟರಿಷ್ಟರ ಎದುರಿನಲ್ಲಿ ರಾತ್ರಿಯ ಅಡಿಗೆಗಾಗಿ ಕಟ್ಟಿಗೆ ಇಲ್ಲವೆಂದು ಹೇಳುವುದಕ್ಕೆ ಬಂದೆಯೇನೋ ನಾಚಿಕೆಯಿಲ್ಲದವಳೇ ಹೋಗು ಬೇಗ ಅಡಿಗೆ ಮುಗಿಸಿ ಬಂದವರಿಗೆ ಬಡಿಸು '' ಹೀಗೆಂದು ಗಿರಿಯಮ್ಮನ ಅತ್ತೆ ಅವಳನ್ನು ಅಡಿಗೆಮನೆಯೊಳಗೇ ದೂಡಿದಳು ಬಲವಾಗಿ ಅತ್ತೆಯಿಂದ ದೂಡಲ್ಪಟ್ಟ ಗಿರಿಯಮ್ಮ ಅಡಿಗೆ ಮನೆಯೊಳಗೆ ಹೋಗಿ ದೊಪ್ಪನೆ ಬಿದ್ದಳು ಬಿದ್ದ ರಭಸಕ್ಕೆ ತಾಕಿದ ಹಣೆಯಿಂದ ರಕ್ತಸ್ರಾವ ಆರಂಭವಾಯಿತು ಗಿರಿಯಮ್ಮ ಸಾವರಿಸಿಕೊಂಡು ಮೆಲ್ಲಗೆ ಎದ್ದವಳೇ ರಕ್ತಸೋರುತ್ತಿದ್ದ ಹಣೆಯನ್ನು ಬಲವಾಗಿ ಒತ್ತಿಕೊಂಡು ನೋವಿನಿಂದಲೇ ನಕ್ಕಳು

"ನನ್ನ ನಮಸ್ಕಾರವನ್ನು ಎಷ್ಟು ವಿಧದಲ್ಲಿ ಸ್ವೀಕರಿಸುವೆ ತಂದೆ ಈ ಪಾಮರಳನ್ನು ಇನ್ನೂ ಎಷ್ಟು ಬಗೆಯಾಗಿ ಪರೀಕ್ಷಿಸಬೇಕೆಂದಿರುವೆ ?'', ಎಂದವಳು

ದೇವರಲ್ಲಿ ಪ್ರಶ್ನಿಸುತ್ತಾ ಅಡಿಗೆಗಾಗಿ ಸಿದ್ಧತೆಗೊಳಿಸಿ ಕಣ್ಣೀರು ಹರಿಸುತ್ತಾ ಮುಂದೇನು ಎಂಬಂತೆ ದೇವರಲ್ಲಿ ಮೊರೆಯಿಟ್ಟಳು

ರಾಗ ಕಾಫಿ ತಾಳ ತೀನ್‌ತಾಲ್

ನಂಬಿದೆ ನಂಬಿದೆ ಅಂಬುಜಾಕ್ಷ ನಿನ್ನಾ ।
ನಂಬಿದ ನಂಬಿದ ನಂಬಿದೆನಯ್ಯಾ ॥ ಪಲ್ಲವಿ ॥

ಮೊರೆಯಿಡೆ ದ್ರೌಪತಿ । ತ್ವರಿತದಿ ಪೋಗುತ । 
ಪೊರೆದ ಮಹಾನುಭಾವ । ಮುರಹರ ನಿನ್ನ ॥ ೧ ॥

ಶಕ್ತನೆ ನಿನ್ನಯ । ಭಕ್ತಿಯಿಂ ಭಜಿಸುವೆ ।
ಭಕ್ತರಿಗೆಲ್ಲಾ ನೀನು । ಮುಕ್ತಿ ಕೊಡುವೆ ಎಂದು ॥ ೨ ॥

ಧರೆಯೊಳು ರಾಜಿಪ । ವರ ಹೆಳವನಕಟ್ಟೆ ।
ಗಿರಿಯೊಳು ನೆಲಸಿಹ । ಪರಮ ಪುರುಷ ರಂಗಾ ॥ ೩ ॥

ಗಿರಿಯಮ್ಮ ಮೈಮರೆತು ಹಾಡುತ್ತಲೇ ಇರುವಾಗ ಅವಳ ಮನಸ್ಸು, ದೇಹಗಳೆರಡೂ ಸೋತು ಬವಳಿಬಂದಂತಾಗಿ ಒಂದು ಕಡೆ ಬಿದ್ದಿದ್ದಾಳೆ ಮೈಮೇಲೆ ಪ್ರಜ್ಞೆ ಇಲ್ಲದೆ

ಮನೆಗೆ ಬಂದ ಅತಿಥಿಗಳು ಮೃಷ್ಟಾನ್ನ ಬೋಜನವುಂಡು ತೃಪ್ತರಾಗಿ ತೇಗುತ್ತಾ ತಾವು ಹೊರಡುವ ಮುನ್ನ ಗಿರಿಯಮ್ಮನಿಗೂ ಹೇಳಿ ಹೋಗೋಣವೆಂದು ಅಡಿಗೆ ಮನೆ ಬಾಗಲಿಗೆ ಬಂದಾಗ ಗಿರಿಯಮ್ಮ ಅದೇ ತಾನೇ ಎಚ್ಚೆತ್ತು ಕುಳಿತಿದ್ದವಳು 'ಇದೇನು ಹೀಗಾಯಿತು ಇನ್ನೂ ಅಡಿಗೆಯೇ ಆಗಿಲ್ಲ ಬಂದವರಿಗೇನು ಬಡಿಸಲಿ ಇನ್ನೂ ಅಡಿಗೆಯಾಗದೆ ಸುಮ್ಮನೇ ಕುಳಿತಿರುವೆನಲ್ಲಾ' ಎಂದಾ ಲೋಚಿಸುತ್ತಿದ್ದಂತೆಯೇ ಅಡಿಗೆ ಮನೆ ಬಾಗಿಲಲ್ಲಿ ನಿಂತ ಅತಿಥಿಗಳು ಅವಳಿಗೆಂದರು

"ಗಿರಿಯಮ್ಮಾ ನೀನು ಅಡಿಗೆಯಲ್ಲಿ ಬಹಳ ನಿಪುಣೆಯಮ್ಮಾ ನಿನ್ನ ಕೈ ಅಡಿಗೆ ಊಟ ಮಾಡಿದ ನಮಗೆ ಅಮೃತಪಾನ ಮಾಡಿದಂತೆ ಆನಂದವಾಗಿದೆ ನಿನ್ನಂತಹ ಸೊಸೇನ್ನ ಪಡೆದ ಕೃಷ್ಣಪ್ಪನವರೇ ನಿಜವಾಗಿ ಧನ್ಯರು"

ಗಿರಿಯಮ್ಮನಿಗೆ ಅಚ್ಚರಿಯಾಗಿತ್ತು "ನಾನಿನ್ನೂ ಅಡಿಗೆಗೇ ಇಟ್ಟಿಲ್ಲ ಇವರು

ಹೀಗೆನ್ನುತ್ತಿದ್ದಾರಲ್ಲಾ ಇದೇನು ಭ್ರಮೆಯೇ ಎಂದುಕೊಂಡು ಮೇಲೆದ್ದಳು, ಬಂದವರು ಹೊರಟು ಹೋದರು

ಒಲೆಯ ಬಳಿಯಿದ್ದ ಪಾತ್ರೆಗಳ ಬಳಿ ಬಂದು ಗಿರಿಯಮ್ಮ ಬಗ್ಗಿ ನೋಡಿದಾಗ ಪ್ರತಿಯೊಂದು ಪಾತ್ರೆಯಿಂದಲೂ ಘಮಘಮಿಸುವ ಅಡಿಗೆಯ ವಾಸನೆ ಅವಳ ಮೂಗಿಗೆ ಬಡಿಯಿತು

ಅಡಿಗೆ ಮಾಡಿದವರ್ಯಾರು ಬಡಿಸಿದವರ್ಯಾರು ಎಂದವಳು ಆಲೋಚಿಸುತ್ತಿರುವಂತೆಯೇ ಅವಳನ್ನು ಹೊಗಳುವ ಸಲುವಾಗಿ ಅವಳ ಮಾಸಿ ನಮ್ಮ ಅಲ್ಲಿಗೇ ಬಂದು ನುಡಿದರು

"ಗಿರಿಯಮ್ಮ ನೀನು ಎಂತಹ ದೇವತೆಯಮ್ಮಾ ಆ ನಳ ಮಹಾರಾಜನ ಪಾಕದಂತೆ ರುಚಿಕರವಾದ ಅಡಿಗೆಯನ್ನು ಅದೆಷ್ಟು ಬೇಗ ಮಾಡಿ ಎಲ್ಲರಿಗೂ ಬಡಿಸಿಬಿಟ್ಟೆ ಆಯ್ತು ಇನ್ನು ನೀನು ಊಟ ಮಾಡೇಳು ಆಗಲೇ ವೇಳೆಯಾಯಿತು" ಎಂದವರು ಅಲ್ಲಿಂದ ಕದಲಿದರು ಗಿರಿಯಮ್ಮನಿಗೆ ಸಕಲವು ಗ್ರಹಿತವಾಗಿ ತನ್ನ ಬದಲಿಗೆ ಅಡಿಗೆ ಮಾಡಿ ಆ ಸ್ವಾಮಿಯೇ ತನ್ನ ವೇಷದಲ್ಲಿ ಬಂದ ಅತಿಥಿಗಳಿಗೆ ಬಡಿಸಿ ತೃಪ್ತಿಗೊಳಿಸಿದ್ದಾನೆ ಸ್ವಾಮಿಯ ರೂಪವನ್ನು ಸಂದರ್ಶಿಸಿ ಆವನು ತಯಾರಿಸಿದ ಅಡಿಗೆಯನ್ನು ಅವರೆಲ್ಲರೂ ಭೋಜನ ಮಾಡಬೇಕೆಂದರೆ ಸಾಮಾನ್ಯವೇ ತನಗಿಂತಲೂ ಅವರೆಂತಹ ಉತ್ತಮ ಜೀವಿಗಳು ತನಗೆ ಇಂದು ಭಗವಂತನ ದರುಶನವಿಲ್ಲದೆ ಹೋಯಿತಲ್ಲಾ ಎಂದವಳು ಪರಿತಪಿಸಿದ್ದಾಳೆ

ಪರಮಾತ್ಮ ತಯಾರಿಸಿದ ಪರಮಾನ್ನವನ್ನು ಗಿರಿಯಮ್ಮನೂ ಸೇವಿಸಿ ದೇವರಮನೆಗೆ ಬಂದು ಮತ್ತೆ ಮತ್ತೆ ದೇವರನ್ನು ಸ್ತುತಿಸತೊಡಗಿದ್ದಾಳೆ

ರಾಗ ನಾಟಿ (ದೇಸ್) ತಾಳ ರೂಪ (ಝಪ್)

ಪಾಹಿ ಪರಮಾನಂದ ಪಾಹಿ ಮುನಿಜನ ವಂದ್ಯ ।
ಪಾಹಿ ಖಳಜನ ಬಂಧ ಪಾಹಿ ಗೋವಿಂದಾ ॥ ಪಲ್ಲವಿ ॥

ಪಾಹಿ ಗೋಪಿಯ ನಾಥ ಪಾಹಿ ಮನ್ಮಥತಾತ ।
ಪಾಹಿ ಲಕ್ಷ್ಮೀಕಾಂತ ಪಾಹಿ ಶ್ರೀಕಾಂತಾ ॥ ಅ ಪಲ್ಲವಿ ॥

ಮತ್ಸ್ಯರೂಪಲಿ ಬಂದು ಹೆಚ್ಚಿನಾ ದೈತ್ಯನ ಕೊಂದೆ ।
ಬೆಚ್ಚರದೆ ಬಹುಗಿರಿಯ ಬೆನ್ನಲಿ ತಾಳ್ದೆ ।
ಬಚ್ಚಿಟ್ಟ ಧರಣಿಯನು ಒಲುಮೆಯಿಂದಲಿ ತಂದೆ ।
ಅರ್ಚಿಸಿದ ಪ್ರಹ್ಲಾದಗೊಲಿದೆ ನರಸಿಂಹಾ ॥ ೧ ॥

ಕುಬುಜ ರೂಪಿಲೆ ನೆಲನ ಬೇಡಿ ಬಲಿಯನು ತುಳಿದೆ ಪಿತನಾಡಿದ ।
ಶಬ್ದವನು ಕೇಳಿ ಮಾತೆಯ ಶಿರವನರಿದೆ ।
ಕೊಬ್ಬಿದ್ದ ರಾವಣನ ಕಂಧರವ ಖಂಡಿಸಿದೆ ।
ಅಬ್ಜಮುಖಿ ಜಾನಕಿಯನಾಳ್ದೆ ಶ್ರೀರಾಮ ॥ ೨ ॥

ತುರುವಿಂಡು ಕಾಯ್ದು ತಪವಳಿದು ಪತಿವ್ರತೆಯರನು ।
ಭರದಿ ವಾಜಿಯನೇರಿ ಚರಿಸುತ ಬಂದೆ ।
ಕರುಣಾಳು ಹೆಳವನಕಟ್ಟೆ ರಂಗಯ್ಯಾ ಪಿಳ್ಳಂ ।
ಗಿರಿ, ನೆಲವಾಸ ಶ್ರೀ ವೆಂಕಟೇಶ ॥ ೩ ॥

ದೇವರ ಕೋಣೆಯಲ್ಲಿ ಮುಕ್ತಕಂಠದಿಂದ ಹಾಡುತ್ತಿದ್ದ ಗಿರಿಯಮ್ಮನ ಮಧುರಗಾನವನ್ನು ಕೊಟ್ಟಿಗೆಯೊಳಗಿನ ದನಕರುಗಳು ಕಿವಿಯಾಲಿಸಿ ಕೇಳತೊಡಗಿತು ತನ್ನ ಕೋಣೆಯಲ್ಲಿ ಮಲಗಿದ್ದ ತಿಪ್ಪರಸ ಆವಳ ಸಂಗೀತ ಕೇಳಲು ಹಾಸಿಗೆಯ ಮೇಲೆ ಎದ್ದು ಕುಳಿತ

ಗಿರಿಯಮ್ಮನ ಅತ್ತೆ, ಸೊಸೆ ಹೊತ್ತು ಗೊತ್ತಿಲ್ಲದೆ ಹಾಡುವಳೆಂದು ಸಿಡುಕಿ ಮುಸುಕು ಬೀರಿ ಮಲಗಿದಳು

*    *    *    *

ಒಂದು ದಿನ, ಅಂದು ಗಿರಿಯಮ್ಮ ನಡುಮನೆಯಲ್ಲೇ ಕುಳಿತು ಅಕ್ಕಿ ಆರಿಸುತ್ತಿದ್ದಳು ಆವಳ ಮಗ್ಗುಲಿಗೇ ಅವಳ ವಾರಗಿತ್ತಿಯೂ ಕುಳಿತಿದ್ದರೂ ಗಿರಿಯಮ್ಮನೊಂದಿಗೆ ಮಾತನಾಡುವ ಸಹೃದಯತೆ ಆವಳಲ್ಲಿರಲಿಲ್ಲ

ನಿಶ್ಶಬ್ದವಾದ ವಾತಾವರಣದಲ್ಲಿ ದೇವರ ಕೋಣೆಯಿಂದ ಕೃಷ್ಣಪ್ಪನವರು ಉಚ್ಚರಿಸುತ್ತಿದ್ದ ದೇವರ ಪೂಜೆಯ ಮಂತ್ರ ಮಾತ್ರ ಕೇಳಿಬರುತ್ತಿತ್ತು ಗಿರಿಯಮ್ಮನ ಅತ್ತೆ ಅಡಿಗೆಮನೆಯೊಳಗೆ ಪಾತ್ರೆ ಪಡಗುಗಳನ್ನು ತಿದ್ದಿಡುತ್ತಿದ್ದಳು

ಹಿತ್ತಿಲಿನ ಕೊಟ್ಟಿಗೆಯಿಂದ ಅಂಬಾ ಎನ್ನುವ ಕೂಗು ಕೇಳಿ, ಗಿರಿಯಮ್ಮ ಕರುಗಳಿಗೆ ಹುರುಳಿ ರುಬ್ಬಿ ತಿನ್ನಿಸುವ ಹೊತ್ತಾಯಿತೆಂದು ಇನ್ನೇನು ಮೇಲೇಳುವುದರಲ್ಲಿದ್ದಳು

ಅದೇ ವೇಳೆಗೆ ಮನೆಯ ಮುಂಬಾಗಿಲಲ್ಲಿ ಯಾರೋ ನಿಂತು "ಅಮ್ಮಾ ಶ್ಯಾನುಬೋಗರು ಒಳಗಿದ್ದಾರೆಯೇ ತಾಯಿ ?'' ಎಂದು ಜೋರಾಗಿ ಕೂಗಿದರು ಗಿರಿಯಮ್ಮ ಅವರಿಗೆ ತಟ್ಟನೆ ಉತ್ತರಿಸಿದಳು ಬಾಗಿಲಿಗೆ ಬಂದು ನಿಂತು

"ಅಪ್ಪಾ, ನಮ್ಮ ಮಾವ ಮನೆಯಲ್ಲಿಲ್ಲ ಮಾದಿಗರ ಕೇರಿಗೆ ಜೋಡು ಮಾಡಿಸುವುದಕ್ಕಾಗಿ ಹೋಗಿದ್ದಾರೆ ಏನಾದರೂ ವಿಷಯ ತಿಳಿಸುವುದಿತ್ತೇ ''

"ಏನಿಲ್ಲ ತಾಯಿ ನಾವೇ ಮತ್ತೆ ಬರುತ್ತೇವೆ ''

ಬಂದವರು ಹೊರಟುಹೋದರು ಗಿರಿಯಮ್ಮ ಮನದಲ್ಲೇ ನಕ್ಕು ಕರುವಿಗೆ ಹುರುಳಿ ರುಬ್ಬಲು ಹೊರಟಳು

ಕೃಷ್ಣಪ್ಪನವರಿಗೆ ಗಿರಿಯಮ್ಮ ಹೇಳಿಕಳುಹಿಸಿದ ಉತ್ತರ ಕೇಳಿಸಿತ್ತು ತಾವು ದೇವರ ಪೂಜೆಗೆ ಕುಳಿತಿರುವುದನ್ನು ಸೊಸೆಯು ನೋಡಿದ್ದಾಳೆ ಹಾಗಿದ್ದೂ ಬಂದವರ ಮುಂದೆ ತಮ್ಮ ಬಗ್ಗೆ ಸುಳ್ಳು ಹೇಳುವುದೇ ಎಂದವರಿಗೆ ಸೊಸೆಯ ಮೇಲೆ ಕೋಪವೇ ಬಂದಿತ್ತು ಬೇಗ ಬೇಗನೇ ಪೂಜೆ ಮುಗಿಸಿ, ಹುರುಳಿ ರುಬ್ಬುತ್ತಿದ್ದ ಸೊಸೆಯ ಬಳಿಗೆ ಬಂದವರೇ ಅವಳನ್ನು ಗದ್ದರಿಸಿ ಪ್ರಶ್ನಿಸಿದರು

"ಗಿರಿಯಮ್ಮ, ನಾನು ಪೂಜೆಗೆ ಕುಳಿತಿದ್ದನ್ನು ನೋಡಿಯೂ ನೀನು ಬಂದವರ ಮುಂದೆ ಸುಳ್ಳು ಹೇಳಿದ್ದೇಕೆ ? ನಾನು ಅಷ್ಟು ಗಟ್ಟಿಯಾಗಿ ಪಾರಾಯಣ ಮಾಡುತ್ತಿದ್ದರೂ ಅದು ನಿನಗೆ ಕೇಳಿಸಿರಲಿಲ್ಲವೇ ? ಅಥವಾ ನನಗೆ ಅಪಮಾನ ಮಾಡಲೆಂದೇ ಹಾಗೆ ಹೇಳಿದೆಯೋ ?''

ಗಿರಿಯಮ್ಮ ರುಬ್ಬುವುದನ್ನು ನಿಲ್ಲಿಸಿ ವಿಧೇಯಳಾಗಿ ಮಾವನವರ ಎದುರಿಗೆ ತಲೆಬಾಗಿ ನಿಂತು ವಿನಯವಾಗೇ ಉತ್ತರಿಸಿದಳು

"ಮಾವನವರೇ, ನೀವು ಪೂಜೆ ಮಾಡುತ್ತಿದ್ದುದೂ, ಗಂಟೆ ಬಾರಿಸಿ ಕೊಂಡು ಮಂತ್ರೋಚ್ಚಾರಣೆ ಮಾಡುತ್ತಿದ್ದುದೂ ನನಗೆ ಕೇಳಿಸಿತ್ತು ಆದರೆ ನನಗೆ ತಿಳಿದಮಟ್ಟಿಗೆ

ನಿಮ್ಮ ದೇಹವು ಪೂಜಾಗೃಹದಲ್ಲಿತ್ತೇ ವಿನಃ ನಿಮ್ಮ ಮನಸ್ಸು ಅಲ್ಲಿರಲಿಲ್ಲ ಹೊಲೆಯರ ಕೇರಿಯಲ್ಲಿ ಮೆಟ್ಟಿನ ವ್ಯವಹಾರದಲ್ಲಿ ತೊಡಗಿತ್ತು ಆದ್ದರಿಂದ ನಾನು ಹಾಗೆ ಹೇಳಿದೆ ಇದರಲ್ಲಿ ಏನಾದರೂ ತಪ್ಪಿದ್ದರೆ ಕ್ಷಮಿಸಿ'' ಎಂದಳು

ಕೃಷ್ಣಪ್ಪನವರು ತಮ್ಮ ಮನಸ್ಸು ಪೂಜಾ ಸಮಯದಲ್ಲಿ ಕಲುಷಿತಗೊಂಡದ್ದು ಇವಳಿಗೆ ಹೇಗೆ ತಿಳಿಯಿತು ಎಂದು ಆಚ್ಚರಿಗೊಂಡವರಾಗಿದ್ದಾರೆ

"ಅಮ್ಮಾ ಗಿರಿಯಮ್ಮ, ನೀನೆಂತಹ ಅಪರೋಕ್ಷ ಜ್ಞಾನಿಯಮ್ಮ, ಪೂಜಾ ಸಮಯದಲ್ಲಿ ನನ್ನ ಮನಸ್ಸು ನಿಜವಾಗಿ ಕಲುಷಿತಗೊಂಡಿತ್ತು ಪೂಜಾವೇಳೆಯಲ್ಲಿ ನನ್ನ ಮನಸ್ಸು ತುಚ್ಛ ವಿಚಾರವನ್ನು ಮಾಡುತ್ತಿದ್ದುದು ನಿಜವೇ ? ನನ್ನಿಂದ ಅಪರಾಧವಾಯಿತು ಕ್ಷಮಿಸಮ್ಮಾ'' ಎಂದು ಅವರು ಸೊಸೆಯನ್ನು ಗದ್ದರಿಸಲು ಬಂದವರು ಅವಳಲ್ಲಿ ಕ್ಷಮಾಪಣೆ ಕೇಳಿ ಅಲ್ಲಿಂದ ಕದಲಿದರು

ಲೋಕದಲ್ಲಿ ಬಹುಜನ್ಮ ಸಾಧನ ಮಾಡಿದ ಪಕ್ವಜೀವಿಗಳು ಮಾನವರ ನಿಂದೆ ವಂದನೆಗಳನ್ನು ಗಣನೆಗೆ ತಂದುಕೊಳ್ಳುವುದಿಲ್ಲ ಅವರ ದೃಷ್ಟಿಯಲ್ಲಿ ಲೋಕದ ವ್ಯಾಪಾರಗಳು ಅತಿ ತುಚ್ಛವಾಗಿ ಕಾಣುವುವು ಜನರ ಆಗು ಹೋಗುಗಳನ್ನು ಹೇಳುವುದೇ ಅವರ ದಯಾಳುತನ ಹೇಳದಿರುವುದು ಅವರ ಮಿತ ಸ್ವಭಾವದ ಲಕ್ಷಣ ಮಿತಸ್ವಭಾವದ ಮಿತಿ ಮೀರಿದರೆ ಜನರನ್ನು ನೋಡಿ ನಗುವರು ಇಲ್ಲವೇ ಜನರ ಕರ್ಮವನ್ನು ನೋಡಿ ಅಳುವುದೂ ಉಂಟು

ಅಪರೋಕ್ಷ ಜ್ಞಾನಿಯಾಗಿದ್ದ ಗಿರಿಯಮ್ಮ ಮನೆಯವರ ಹೊಗಳಿಕೆ—ತೆಗಳಿಕೆ ಯಿಂದ ಲವಮಾತ್ರವೂ ವಿಚಲಿತಳಾಗದೆ ತನ್ನ ಪಾಡಿಗೆ ತನ್ನ ಧರ್ಮವನ್ನು, ಕುಲಸ್ತ್ರೀ ಯಾವ ರೀತಿ ಕಾಪಾಡಿಕೊಳ್ಳುವಳೋ ಅದೇ ರೀತಿ ತನ್ನ ನಿತ್ಯ ಜೀವನದ ನಡವಳಿಕೆಯಲ್ಲಿ ಅಲ್ಪವೂ ಚ್ಯುತಿ ಬಾರದಂತೆ ಮನೆಗೆಲಸವನ್ನು ತಾನೇ ಮಾಡುತ್ತಾ ಹರಿಸಂಕೀರ್ತನೆಯಲ್ಲಿ ಉಳಿದ ವೇಳೆಯನ್ನು ಕಳೆಯುತ್ತಿದ್ದಳು ಗಂಧವು ತಾನು ಸವೆದಂತೆ ದಿನದಿನಕ್ಕೆ ಹೆಚ್ಚು ಹೆಚ್ಚು ಪರಿಪಕ್ವವಾಗಿ ಸುಗಂಧವನ್ನು ಬೀರುವಂತೆ ಗಿರಿಯಮ್ಮನ ಬಾಳು ದಿನೇ ದಿನೇ ಪರಿಪಕ್ವವಾಗಿ ಅವಳ ಕೀರ್ತಿ ಪಸರಿಸತೊಡಗಿತು

ಗೋಪಾಲದಾಸರು ಗಿರಿಯಮ್ಮನಿಗೆ ಭಗವಂತನ ಮೂರ್ತಿಯನ್ನಿತ್ತು ಉಪದೇಶಿಸಿದ್ದರು "ಸಾಕ್ಷಾತ್ಕಾರ ಮಾಡಿಕೊಳ್ಳದ ಪೂಜೆ ನಿಜವಾದ ಪೂಜೆಯಲ್ಲ

ಅದು ಬಿಟ್ಟರೆ ಗತಿಯಿಲ್ಲ ಪೂಜೆಗೆ ಬಕ್ತಿಯಿರಬೇಕು ಭಕ್ತಿಯು ಪೂಜಕನ ಆತ್ಮಶಕ್ತಿಯಾಗಬೇಕು ಶಕ್ತಿಯಿಂದ ವ್ಯಕ್ತಿದರ್ಶನವಾಗಬೇಕು ಮೂರ್ತಿ ಇಲ್ಲದೆ ಧ್ಯಾನವಿಲ್ಲ, ಆವಾಹನೆಯಿಲ್ಲ, ಉಪಚಾರಗಳಿಲ್ಲ ಯೋಗಿಯ ಧ್ಯಾನದಲ್ಲಿ ನಿಲ್ಲುವುದು ಮೂರ್ತಿ ಮೂರ್ತಿಗೆ ಉಪಾಸಕನು ಕೊಟ್ಟದ್ದೇ ರೂಪ ಅದು ಸೌಮ್ಯವಾಗಬಹುದು ಉಗ್ರವಾಗಬಹುದು ಸ್ತ್ರೀ, ಪುರುಷ ಯಾರಾದರೂ ಆಗಬಹುದು'' ಎಂಬುದಾಗಿ ಗಿರಿಯಮ್ಮನಿಗೆ ಗೋಪಾಲದಾಸರು ನೀಡಿದ ಆಜ್ಞೆಯ ಪ್ರಕಾರ ಗಿರಿಯಮ್ಮ ಬಾಲಗೋಪಾಲನ ಆರಾಧಕಳಾಗಿ ಆ ಮೂರ್ತಿಯನ್ನೇ ಪೂಜಿಸತೊಡಗಿದ್ದಳು ಬೆಣ್ಣೆ ಕಡೆಯುವಾಗ ಕೃಷ್ಣ ಬರದಿದ್ದಲ್ಲಿ, "ಕೃಷ್ಣ ಇಗೋ ನಿನಗೆ ಮೀಸಲಾದ ಬೆಣ್ಣೆ, ಬೇಗ ಬಾ ತಿನ್ನು'' ಎನ್ನುವಳು, ನಗುವಳು ಬಾರದಿದ್ದಲ್ಲಿ ಸಿಟ್ಟುಮಾಡಿ, ಅವನು ಬರುವಂತೆ ಮಾಡಿ ಕೃಷ್ಣನ ಒಂದೊಂದೇ ಬಾಲಲೀಲೆಗಳನ್ನು ನೋಡಿ ಆನಂದದಿಂದ ಹಾಡುತ್ತಿದ್ದಳು

ಹೆಂಡತಿಯ ಬಗ್ಗೆ ತಿಪ್ಪರಸನಿಗೆ ಅಪಾರವಾದ ಭಕ್ತಿ ಅವಳು ದೇವರ ಮನೆಯಲ್ಲಿ ರಂಗವಲ್ಲಿಯಿಡುತ್ತಾ ತನ್ನದೇ ಮುದ್ರಿಕೆಯಿಂದ ರಚಿಸಿ ಹಾಡುವ ದೇವರನಾಮಗಳನ್ನು ಕೇಳಿ ಆನಂದದಿಂದ ಭಾವುಕನಾಗುತ್ತಿದ್ದ

ಲೋಕವೇ ಗೌರವಿಸುತ್ತಿರುವ ಗಿರಿಯಮ್ಮನನ್ನು ಅವಳ ಅತ್ತೆ ವಾರಗಿತ್ತಿಯರು ಮಾತ್ರ ಒಂದಲ್ಲೊಂದು ಕಾರಣದಿಂದ ತೆಗಳುತ್ತಿದ್ದರು "ಗಂಡನಿಗೆ ಮೋಡಿ ಮಾಡಿದ್ದಾಳೆ ತಿಪ್ಪರಸ ಹೆಂಡತಿ ಪೂಜೆಯೇ ಶ್ರೇಷ್ಠ ಎಂದು ತಿಳಿದಿರುವ ಷಂಡ. ಇವಳು ಶಾಸ್ತ್ರ ಹೇಳುವುದನ್ನೇ ಕೇಳಿ ಇವಳಿಗೆ ಕಾಣಿಕೆಗಳನ್ನು ತಂದುಕೊಡುವ ಜನರೋ ಮೂರ್ಖರು'' ಎಂಬುದಾಗಿ ಹಲವರ ತೀರ್ಮಾನ ಗಿರಿಯಮ್ಮನ ಅತ್ತೆಯ ತೀರ್ಮಾನವೂ ಹೌದು ಗಿರಿಯಮ್ಮ ದೈವಾಂಶ ಸಂಭೂತಳು ಎಂಬುದಕ್ಕೆ ಸಾಕಷ್ಟು ನಿದರ್ಶನಗಳು ದೊರಕುತ್ತಿದ್ದರೂ ಭಗವಂತ ಮತ್ತೆ ಮತ್ತೆ ಅವಳನ್ನು ಪರೀಕ್ಷೆಗೆ ಗುರಿಮಾಡಿ ಅವಳ ದೈವೀಕತ್ವವನ್ನು ಲೋಕಕ್ಕೆ ಸಾರುವುದರಲ್ಲಿದ್ದ

ಕಾಲಚಕ್ರ ಉರುಳಿದಂತೆ ಗಿರಿಯಮ್ಮನಿಂದ ಅನೇಕ ಅದ್ಭುತ ಕಾರ್ಯಗಳು ನಡೆಸಲ್ಪಟ್ಟು ಪರಮಾತ್ಮ ಜನರನ್ನು ಅವಳತ್ತ ಆಕರ್ಷಿತಗೊಳ್ಳುವಂತೆ ಮಾಡಿದ್ದಾನೆ

ಹೀಗಿರುವಾಗ ಒಂದು ಬಾರಿ ಮಂತ್ರಾಲಯದ ಮಠಾದೀಶ್ವರರಾದ ಶ್ರೀ ಸುಮತೀಂದ್ರ ಶ್ರೀಪಾದಂಗಳವರು ತಮ್ಮ ಸಂಚಾರ ಕಾಲದಲ್ಲಿ ಮಲೆಬೆನ್ನೂರಿಗೆ ಬಂದಿಳಿದಿದ್ದಾರೆ ರಂಗನಾಥಸ್ವಾಮಿಯ ದೇವಸ್ಥಾನವೇ ಅವರ ಬಿಡಾರವಾಗಿದೆ ಗಿರಿಯಮ್ಮನಾದರೋ ತನ್ನ ದಿನನಿತ್ಯದ ಕ್ರಮದಂತೆ ಏಳುದಿನಗಳಿಗೆ ಏಳು ಬಗೆಯ ಭಗವಂತನ ಚಿತ್ರವನ್ನು ರಂಗವಲ್ಲಿಯಲ್ಲಿ ಚಿತ್ರಿಸಿ ಅದನ್ನು ಪೂಜಿಸಿ ಅದರಲ್ಲಿ ಗೋಪಾಲದಾಸರು ಅನುಗ್ರಹಿಸಿ ನೀಡಿದ ಬಾಲಗೋಪಾಲನ ಮೂರ್ತಿಯನ್ನು ಕುಳ್ಳಿರಿಸಿ ಹಾಡುತ್ತಿದ್ದಳು ಶ್ರೀಗಳವರು ಅವಳ ಹಾಡನ್ನು ಆಲೈಸಿ ಅವಳ ಭಕ್ತಿಗೆ ಮೆಚ್ಚಿದುದೂ ಉಂಟು

ಅಂದು ಗಿರಿಯಮ್ಮನದೇ ಬಿಕ್ಷೆ ಸ್ವಾಮಿಗಳೆದುರಿಗೆ ಗಿರಿಯಮ್ಮನನ್ನು ಅಪಮಾನಗೊಳಿಸಬೇಕೆಂಬ ಇಷ್ಟವಾಗಿತ್ತು, ಅವಳನ್ನು ದ್ವೇಷಿಸುತ್ತಿದ್ದ ಪಂಡಿತರುಗಳಿಗೆ ಜನರು ಗಿರಿಯಮ್ಮನನ್ನು ನಂಬಿದ್ದಾರೆ ತಮಗೆ ದೊರಕುತ್ತಿದ್ದ ಕಾಣಿಕೆಗಳು ಅವಳಿಗೆ ಸಲ್ಲುತ್ತಿದೆ ಮೇಲಾಗಿ ಅವಳು ಸ್ತ್ರೀ ಅವಳಿಂದ ತಮಗೆ ಅಪಮಾನವೇ ? ಹಾಗಿದ್ದ ಮೇಲೆ ಶ್ರೀಗಳು ಬಂದಿರುವಾಗ ತಾವು ಅವಳನ್ನು ಅವರೆದುರಿನಲ್ಲಿ ಅಪಮಾನ ಗೊಳಿಸುವ ಹಂಬಲ ಅವರದು

ಶ್ರೀಗಳವರ ಮಠಾಧಿಕಾರಿಗಳಿಗೆ ಗಿರಿಯಮ್ಮನ ಬಗ್ಗೆ ಸಲ್ಲದ ಸುದ್ದಿಗಳನ್ನು ಹೇಳಿ ಪಂಡಿತರುಗಳು ಅವಳ ಮೇಲೆ ಆರೋಪ ಹೊರಸಿದರು

'ಮದುವೆಯಾದಾರಭ್ಯ ಗಿರಿಯಮ್ಮ ಗಂಡನೊಡನೆ ಸಂಸಾರ ನಡೆಸಿಲ್ಲ ಅಲ್ಲದೆ ಗಂಡನೊಡನೆ ಬಾಳ್ವೆ ನಡೆಸದೆ ಸಂತಾನ ಪಡೆಯದೆ, ಪಿತೃಗಳಿಗೆ ಸದ್ಗತಿಯನ್ನುಂಟುಮಾಡುವುದನ್ನು ಬಿಟ್ಟು ವಿರಾಗಿಯಂತಿದ್ದಾಳೆ '

ಕುಲಸ್ತ್ರೀಯಾಗಿ, ಮೇಲಾಗಿ ವಿವಾಹಿತೆಯಾಗಿ, ತಾಳಹಾಕಿ ಹಾಡಿಕೊಂಡು ನರ್ತಿಸುವುದು ಮತ್ತೊಂದು ಅಪರಾಧ

"ಗಿರಿಯಮ್ಮನ ನಡವಳಿಕೆಗಳೆಲ್ಲಾ ಧರ್ಮವಿರುದ್ಧವಾದುದು ಹೆಂಗಸರಿಗೆ ಧರ್ಮೋಪದೇಶ ಮಾಡುವ ಹಕ್ಕು ಬಾಧ್ಯತೆ ತಾನೇ ಎಲ್ಲಿ ಬರುವುದು ಹೀಗಿದ್ದರೂ ಗಿರಿಯಮ್ಮ ಜನರಿಗೆ ಉಪದೇಶ ನೀಡುತ್ತಾಳೆ ''

ಆದುದರಿಂದ ಗಿರಿಯಮ್ಮ ದೋಷ ಪೂರಿತಳು ಅವಳಿಗೆ ಮುದ್ರಾಧಾರಣೆ ಕೊಡದು ಎಂದು ಮಠಾದಿಕಾರಿಗಳ ಮುಂದೆ ಪಂಡಿತರುಗಳು ತಮ್ಮ ಹೃದಯದಲ್ಲಡಗಿದ್ದ ವಿಷ ಕಕ್ಕಿದರು

ಹೆಂಡತಿಯ ಬಗ್ಗೆ ಅಪಪ್ರಚಾರ ನಡೆಸಿದ ಪಂಡಿತರುಗಳ ಬಗ್ಗೆ ತಿಪ್ಪರಸನಿಗೆ ಬಹಳ ಬೇಸರವಾಯಿತು ಮಕ್ಕಳಿಲ್ಲದವರಿಗೆ ಮುದ್ರಾದಾರಣೆಯಿಲ್ಲವಂತೆ ಎಂಬ ವಿಷಯವನ್ನೇ ದೊಡ್ಡದು ಮಾಡಿ ತನ್ನ ಹಿರಿಮೆಯನ್ನು ಪ್ರದರ್ಶಿಸಿದಳು ಅವಳ ಅತ್ತೆ ಆದರೆ ಈ ವಿಷಯಗಳಿಗೆಲ್ಲಾ ಕಿವಿಗೊಡದೆ ಗಿರಿಯಮ್ಮ ದೇವರ ಪೂಜೆಯನ್ನು ನೋಡುವ ಉದ್ದೇಶದಿಂದ ದೂರದಲ್ಲಿಯೇ ನಿಂತಳು ಅಂದು ಮನೆಯಲ್ಲೇ ಬಿಕ್ಷೆಯಾದುದರಿಂದ ಸ್ವಾಮಿಗಳು ಅವರ ಮನೆಗೇ ಬಂದು ದೇವರ ಪೂಜೆ ಮಾಡುತ್ತಿದ್ದಾರೆ ಕೃಷ್ಣಪ್ಪನವರು ತಮ್ಮ ನೆಂಟರಿಷ್ಟರನ್ನೆಲ್ಲಾ ಆಹ್ವಾನಿಸಿದ್ದಾರೆ ಶ್ರೀಗಳವರವರೆಗೂ ಪಂಡಿತರುಗಳ ಕುಹಕವಾಗಲೀ ಮಠಾಧಿಕಾರಿಗಳ ಮುಂದೆ ಅವರು ಹೇಳಿರುವ ವಿಷಯವಾಗಲೀ ತಲುಪಿಲ್ಲ

ದೇವರ ಪೂಜೆ ವಿಜೃಂಭಣೆಯಿಂದ ನಡೆಯಿತು ದೇವರ ಮಹಾ ಮಂಗಳಾರತಿಯಾಗಿ ಶ್ರೀಗಳವರು ದಂಡ ಪ್ರದಕ್ಷಿಣೆ ಮಾಡಿ ಮುಗಿಸಿದ ನಂತರ ತೀರ್ಥ ಕೊಡುವುದಕ್ಕಾಗಿ ಆಸನದಲ್ಲಿ ಮಂಡಿಸಿದರು ತೀರ್ಥದ ತಟ್ಟೆಯನ್ನು ಮುಂದಿಟ್ಟುಕೊಂಡು ಶ್ರೀಗಳವರು ಪ್ರಥಮ ಬಾರಿಗೆ ಗಿರಿಯಮ್ಮನನ್ನು ತೀರ್ಥಕ್ಕೆ ಕರೆದರು

ಈವತ್ತು ಗಿರಿಯಮ್ಮನೇ ಬಿಕ್ಷೆ ಮಾಡಿಸಿದ್ದಾಳೆಂದು ತಿಳಿದು ಬಂತು ನಮಗೆ "ಆಕೆ ಎಲ್ಲಿ ಮೊದಲು ತೀರ್ಥಕ್ಕೆ ಬರಲಿ"

"ಆಕೆ ಅಪುತ್ರವತಿ ಅಲ್ಲದೆ ಮತ್ತು ಅನೇಕ ದೋಷಾರೋಪಗಳಾಗಿವೆ ಆದುದರಿಂದ ಇತರರಿಗೆ ಮೊದಲು ತೀರ್ಥ ವಿನಿಯೋಗವಾಗಲಿ ಅನಂತರ ಶ್ರೀಗಳವರ ಎದುರಿನಲ್ಲೇ ವಿಚಾರ ನಡೆಸೋಣವೆಂದು ತೀರ್ಮಾನಿಸಿದ್ದೇವೆ" ಎಂದರು ಪಂಡಿತರು

"ಎಂಥವರಿಗೆ ಯಾವದೋಷ ! ಆಕೆಯನ್ನು ಮೊದಲು ತೀರ್ಥಕ್ಕೆ ಕರೆಯಿರಿ" ಎಂದು ಶ್ರೀಗಳವರು ನಕ್ಕು ನುಡಿದರು

ಗಿರಿಯಮ್ಮ ಅವರೆದುರಿಗೆ ಬಂದು ಬಾಗಿ ನಿಂತು ಕೈ ಚಾಚಿದಳು ಅಲ್ಲಿ ನೆರೆದ ಪಂಡಿತರುಗಳಿಗೆಲ್ಲಾ ಅಪಮಾನವೆನ್ನಿಸಿತು ಶ್ರೀಗಳವರ ಮುಂದೆ ತೀರ್ಥಕ್ಕಾಗಿ ಕೈನೀಡಿದ ಗಿರಿಯಮ್ಮನ ಕೈಲಕ್ಷಣವನ್ನು ಶ್ರೀಗಳವರು ಮೊದಲ ದಿನವೇ ಕಂಡು ಕೊಂಡಿದ್ದರು ಆದುದರಿಂದ ಈ ದಿನ ಅಲ್ಲಿ ನೆರೆದಿದ್ದವರಿಗಿಂತ ಮೊದಲೇ ಅವಳಿಗೆ ತೀರ್ಥ ನೀಡುತ್ತಾ ನುಡಿದರು

"ಇದು ದೇವಕೀಯ ಕೈಲಕ್ಷಣ ಯಶೋದೆಯಂತೆ ತಾಯಿ ಸಾಕ್ಷಾತ್ ಶ್ರೀಹರಿಯೇ ಈಕೆಗೆ ಪುತ್ರನಾಗಬೇಕು ಇಂತಹವಳಿಗೆ ಈ ಆರೋಪವೇ "

ಅಲ್ಲಿ ನೆರೆದಿದ್ದವರೆಲ್ಲಾ ಶ್ರೀಗಳವರ ಎದುರಿನಲ್ಲಿ ಆ ಕ್ಷಣ ಮಾತ್ರದಲ್ಲಿ ತಲೆಬಾಗಿ ನಿಂತಿದ್ದಾರೆ ಗಿರಿಯಮ್ಮನ ವ್ಯಕ್ತಿತ್ವಕ್ಕೆ ಅವರು ತಲೆಬಾಗಿದರೂ ಅವರವರ ಕರ್ಮಾನುಸಾರ ಅವಳ ಬಗ್ಗೆ ಅವರೆಲ್ಲಾ ಅಸೂಯಾ ಪರರಾಗಿದ್ದಾರೆ ಗಿರಿಯಮ್ಮನ ವಾರಗಿತ್ತಿಗಂತೂ ಹೃದಯದಲ್ಲೇ ತಳಮಳವಾರಂಭವಾಗಿದೆ. "ನಿನ್ನಂಥಹ ಪುಣ್ಯಾತ್ಮಳ ದರುಶನದ ಬಾಗ್ಯ ನಮಗೆ ದೊರಕಿದ್ದು ನಮ್ಮ ಪುಣ್ಯ ಎಂದು ಶ್ರೀಗಳವರು ಗಿರಿಯಮ್ಮನನ್ನು ಕೊಂಡಾಡಿದರು ಇದನ್ನು ಕೇಳಿದ ಅವಳ ಗಂಡನಾದ ತಿಪ್ಪರಸನೂ ಅವಳ ಮಾವನವರೂ ಅವಳ ಬಗ್ಗೆ ತಮ್ಮ ಭಕ್ತಿಯನ್ನು ಇಮ್ಮಡಿಗೊಳಿಸುವಂತಾಯ್ತು

ಮತ್ತೊಂದು ದಿನ ಶ್ರೀಗಳವರು ದೇವಸ್ಥಾನದಲ್ಲಿ ಪೂಜೆ ಮುಗಿಸಿ ಮತ್ತೆ ಗಿರಿಯಮ್ಮನನ್ನೇ ಮೊದಲು ತೀರ್ಥಕ್ಕೆ ಕರೆದರು ಪ್ರತಿ ದಿನವೂ ಗಿರಿಯಮ್ಮ ಶ್ರೀಗಳವರು ಪೂಜೆಗೆ ಕುಳಿತರೆ ಅಲ್ಲಿಗೆ ಬಂದು ಪೂಜೆ ನಡೆದನಂತರ ದೇವರ ನಾಮ ಹಾಡುವ ಪದ್ಧತಿ ಇಂದು ಅವಳ ಹಾಡು ಮುಗಿದು ಮತ್ತೆ ಗಿರಿಯಮ್ಮನೇ ಪ್ರಥಮ ಬಾರಿಗೆ ತೀರ್ಥಕ್ಕೆ ಕೈ ಯೊಡ್ಡಿದಾಗ, ಮಠಾಧಿಕಾರಿಗಳೇ ಶ್ರೀಗಳವರ ಎದುರಿಗೆ ಪ್ರತಿಭಟಿಸಿ ನಿಂತರು

"ಸಾಧ್ಯವಿಲ್ಲ ಅವಳು ಎಂದಿಗಿದ್ದರೂ ಬಂಜೆ ಬಂಜೆಗೆ ಮೊದಲು ತೀರ್ಥವಿತ್ತು ಆನಂತರ ನಮಗೆ ಕೊಡುವುದರಿಂದ ನಮಗೆ ಅವಮಾನವು ಎಂದವರು ನುಡಿದು ಶ್ರೀಗಳವರನ್ನು ಎದುರಿಸಿ ನಿಂತರು ಅಲ್ಲಿ ನೆರೆದ ಜನರೆಲ್ಲರೂ ಮಠಾಧಿಕಾರಿಗಳ ವರ್ತನೆಗೆ ವಿಸ್ಮಿತರಾಗಿದ್ದಾರೆ ಗಿರಿಯಮ್ಮನ ಭಗವದ್ಭಕ್ತಿಯನ್ನು ಜನರಿಗೆ ತಿಳಿಸಲೋಸುಗ ಶ್ರೀಗಳವರು ಮೌನಧರಿಸಿದಾಗ, ಗಿರಿಯಮ್ಮ ಗರ್ಭಗುಡಿಯೊಳಗೆ ಹೋಗಿ

ಸಾಕ್ಷಾತ್ ಶ್ರೀರಂಗನಾಥಸ್ವಾಮಿಯನ್ನೇ ಕಂಕುಳಲ್ಲೆತ್ತಿಕೊಂಡು ಬಂದಿದ್ದಾಳೆ ಅವಳ ಕಂಕುಳಲ್ಲಿ ಮಂಡಿಸಿದ ಮುದ್ದಾದ ಶಿಶುವನ್ನು ನೋಡಿ ಅಲ್ಲಿ ನೆರೆದಿರುವವರೆಲ್ಲಾ ಸ್ತಬ್ಧರಾಗಿ ನಿಂತಿದ್ದಾರೆ ಆಶ್ಚರ್ಯ ಮಿಶ್ರಿತ ಭಯದಿಂದ ಅವರು ಇಹವನ್ನೇ ಮರೆತಂತೆ ನಿಂತಿರುವಾಗ ಗಿರಿಯಮ್ಮ ತನ್ನ ಕಂಕುಳಿನಲ್ಲಿದ್ದ ಶಿಶುವನ್ನು ಕೆಳಗೆ ಇಳಿಸಿ ಶ್ರೀಗಳವರ ಸಮ್ಮುಖದಲ್ಲಿ ನಿಂತು ಕೈನೀಡಿದವಳೇ ನುಡಿದಳು

"ಇವನೇ ನನ್ನ ಶಿಶು ಈಗ ಈ ಪಾಮರಳಿಗೆ ತೀರ್ಥ ನೀಡಲು ಯಾರ ಆಕ್ಷೇಪಣೆಯೂ ಇಲ್ಲವಷ್ಟೇ ! ಪರಮಾತ್ಮನ ಪಾದಕಮಲಗಳನ್ನಲಂಕರಿಸಿದ್ದ ಕಿರುಗೆಜ್ಜೆಯ ನಾದ ಮಾತ್ರದಿಂದಲೇ ಎಲ್ಲರೂ ಮೋಡಿ ಹಾಕಿದವರಂತೆ ಚಲಿಸದೆ ನಿಂತಿರುವಾಗ, ಶ್ರೀಗಳವರಿಗೆ ಶ್ರೀ ಬಾಲಗೋಪಾಲನ ದರುಶನವಾಗಿದೆ ಅವರು ಆನಂದಬಾಷ್ಪ ತುಂಬಿದವರಾಗಿ ಗಿರಿಯಮ್ಮನಿಗೆ ಕೈ ಮುಗಿದು ನುಡಿದರು

"ಅಮ್ಮಾ ನೀನೆಂತಹ ಪುಣ್ಯವಂತಳಮ್ಮಾ ವ್ಯಾಸರಾಯರಿಗೆ ಕನಕದಾಸರು ಪರಮಾತ್ಮನನ್ನು ತೋರಿಸಿದಂತೆ, ವಾದಿರಾಜರಿಗೆ ವೈಕುಂಠದಾಸರು ಕೇಶವನನ್ನು ತೋರಿಸಿದಂತೆ ತಾಯಿ ನನಗೆ ನೀನು ಬಾಲ ಮುಕುಂದನ ದರುಶನ ಮಾಡಿಸಿದೆ ನೀನು ಯಶೋದೆಯಂತೆ ತಾಯಿ ಎಂದು ಅವಳನ್ನು ಶ್ರೀಗಳವರು ಹರಸಿ ಅವಳಿಗೆ ತೀರ್ಥ ನೀಡಿದ್ದಾರೆ

ಬಾಲಗೋಪಾಲನ ಲೀಲೆಗಳನ್ನು ನೋಡಿ ಸುಖಿಸಿದ ಶ್ರೀಗಳವರಿಗೆ ಯಶೋದೆಯೇ ಗಿರಿಯಮ್ಮನ ರೂಪ ಹೊತ್ತು ಕೃಷ್ಣನನ್ನು ತಂದು ನಿಲ್ಲಿಸಿದಂತೆ ಅನುಭವವಾಗಿದೆ

ಗಿರಿಯಮ್ಮ ಶ್ರೀಗಳವರ ಮುಂದೆ ಇವನೇ ನಿಮ್ಮ ಮೂಲರಾಮನು ಎಂಬುದಾಗಿ ನುಡಿದು ಹಾಡತೊಡಗಿದ್ದಾಳೆ

ರಾಗ ಭೂಪ್ — ತಾಳ ಝಾಪ್

ರಾಮ ಶ್ರೀರಘುನಂದನ । ಶರಣು ಸಾರ್ವಭೌಮ ಭೂಸುರವಂದ್ಯನ ।।
ಸೋಮ ಶೇಖರ ಮಿತ್ರಕಾಮಿತ ಫಲಪಾತ್ರ । ಕಾಮಧೇನು
ವಿಶ್ವ ಭೀಮ ಸನ್ನುತ ಸೀತಾ ।। ಪಲ್ಲವಿ ।।

ಕ್ರೂರ ದಾನವ ಸಂಹಾರ । ಕೌಸಲ್ಯ ಕುಮಾರ ।
ಭೂಭಾರಹರ ಭಜಕಜನೋದ್ಧಾರ ವೇದಾಂತಸಾರ ।

ಚಾರುವದನ ಮಣಿಹಾಸ ಕುಂಡಲಧಾರ ವೀರರಾಘವ
ವಿಶ್ವಾದಾರ ಕರುಣ ಸೀತಾ || ೧ ||

ಪಾಪರಹಿತ ಪಾವನ ಅಹಲ್ಯಾ ಶಾಪಖಂಡಿನ ಚರಣ
ಚಿನುಮಯ ದಿವ್ಯರೂಪ ರಮಾರಮಣಾ ।
ತಾಪ ವಿಚ್ಛೇದನ ತಾಮಸ ಗುಣಹರನಾ
ದಯಾಪರ ಬ್ರಹ್ಮ ಸ್ವರೂಪ ಮೂರುತಿ ಸೀತಾ || ೨ ||

ಮದನ ಕೋಟಿ ಮೋಹನಾಂಗ ಮಾಧವ ಪುಣ್ಯಚರಿತ
ಕರುಣ ಕೃಪಾಂಗ ಹೆಳವನಕಟ್ಟೆ ನಿಲಯ ಶ್ರೀರಂಗ
ಸದಾನಂದ ಸುಮತೀಂದ್ರ ಹೃದಯ ಪಂಕಜ ಭೃಂಗ ।
ಕದನ ವಿಕ್ರಮ ಬಾಹು ಕೋದಂಡಧೃತ ಸೀತಾ
ರಾಮ ಶ್ರೀ ರಘುನಂದನ ||

ಗಿರಿಯಮ್ಮನ ಕೊರಳಿನಿಂದ ಹೊರಟ ಸ್ವರದಿಂದ ಅಲ್ಲಿರುವವರೆಲ್ಲರೂ ಅಮೃತಪಾನ ಮಾಡಿದಂತಾಗಿ ಅವರ್ಣನೀಯ ಆನಂದವನ್ನನುಭವಿಸುತ್ತಿದ್ದಾರೆ

ಶ್ರೀಗಳವರು ಗಿರಿಯಮ್ಮನನ್ನು ಸಕಲರೆದುರಿಗೆ ಹೊಗಳುತ್ತಾ "ಅಮ್ಮಾ ನಿನಗೆ ಯಾರ ಆಶೀರ್ವಾದವೂ ಬೇಡ ಯಾರು ಚಕ್ರಾಂಕನದ ಅಗತ್ಯವೂ ನಿನಗಿಲ್ಲ ಆ ಶ್ರೀಹರಿಯೇ ನಿನಗೆ ಚಕ್ರಾಂಕನ ಮಾಡಿರುವಾಗ ನಿನಗೆ ಚಕ್ರಾಂಕನ ಮಾಡುವ ಅಧಿಕಾರ ನಮಗಿದೆಯೇ ನಿನಗೆ ಚಕ್ರಾಂಕನ ಮಾಡಕೂಡದೆಂದು ಹೇಳುತ್ತಿರುವವರು ಸಾಮಾನ್ಯ ಇಹಸುಖ ಭೋಗಾಪೇಕ್ಷೆಯುಳ್ಳ ನರಮನುಷ್ಯರು ನಿನ್ನ ಮಹತ್ವವನ್ನರಿಯದವರು ನಿನ್ನ ದರುಶನ ಮಾತ್ರದಿಂದಲೇ ಇವರೆಲ್ಲರ ಪಾಪ ಪರಿಹಾರವಾಗುವಂತಹ ಮಹಾ ಭಗವದ್ಭಕ್ತೆ ನೀನು ಎಂದು ನುಡಿದಿದ್ದಾರೆ ಗಿರಿಯಮ್ಮ ಪರಮಾನಂದದಿಂದ ತನಗೆ ತಾನೇ ಮತ್ತೆ ಹಾಡತೊಡಗಿದ್ದಾಳೆ ಬಾಲ್ಯದಲ್ಲಿ ಚಿಕ್ಕಪ್ಪ ಹೇಳಿಕೊಟ್ಟಿರುವ ಪುರಂದರದಾಸರ ಕೀರ್ತನೆ ಅವಳ ಹೃದಯದಲ್ಲಿ ವಿಜೃಂಭಣೆಯಿಂದ ಮೊಳಗುತ್ತಿದೆ

ರಾಗ ದನ್ಯಾಸಿ ತಾಳ ಆದಿತಾಳ

ಯಶೋಧೆ ನಿನ್ನ ಕಂದಗೆ ಏಸು ರೂಪವೇ
ಶಿಶುವಲ್ಲ ನಿನ್ನ ಮಗ ಕೃಷ್ಣ ಜಗತ್ಪತಿಯೆ

ಹಸುಗಳ ಕರೆವಲ್ಲಿ ಹಲವು ರೂಪ ತೋರುವ
ಬಿಸಿಯಹಾಲಿಡುವಲ್ಲಿ ಬೆನ್ನಹಿಂದೆ ಇರುವ
ಮೊಸರ ಕಡೆಯುವಲ್ಲಿ ಮುಂದೆ ತಾ ನಿಂದಿರುವ
ಹಸನಾಗಿ ಮೋಸ ಮಾಡಿ ಬೆಣ್ಣೆಯ ಮೆಲ್ಲುವ || ೧ ||

ಒಬ್ಬರ ಮನೆಯಲ್ಲಿ ಮಲಗಿ ತಾನಿರುವ
ಒಬ್ಬರ ಮನೆಯಲ್ಲಿ ಬೆಣ್ಣೆಕದ್ದು ಮೆಲ್ಲುವ
ಒಬ್ಬರ ಮನೆಯಲ್ಲಿ ರತಿಕ್ರೀಡೆಯಾಡುತಿರುವ
ಒಬ್ಬರ ಮನೆಯಲ್ಲಿ ಪುಟ ಚೆಂಡನಾಡುತಿರುವ || ೨ ||

ಹಿಂದೆ ತಾ ನಿಂದಿರುವ ಮುಂದೆ ಹೋಗುತಿರುವ
ಇಂದು ಮುಖಿಯರ ಕೂಡೆ ಸರಸವಾಡುವ
ಬಂದು ನೋಡೆ ಯಶೋದೆ ಬಣ್ಣದ ಮಾತಲ್ಲ
ನಂದಗೋಪನ ಕಂದ ಪುರಂದರ ವಿಠಲ || ೩ ||

ಹಾಡಿನ ಮೊರೆತದೊಡನೆ ಕೃಷ್ಣ ಆವಳಿಗೆ ಬಾಲ ಲೀಲೆಗಳನ್ನು ತೋರುತ್ತಿದ್ದಾನೆ ಗಿರಿಯಮ್ಮ ಇಹವನ್ನೇ ಮರೆತು ಹಾಡುತ್ತಿರುವುದನ್ನು ಶ್ರೀಗಳವರೂ ಕೇಳುತ್ತಾ ಕುಳಿತಿದ್ದಾರೆ

ಚಂಚಲ ಸ್ವಬಾವದವರು ಎಂದು ಲೋಕದ ಮಾತಾದರೂ ಮನಸ್ಸಿನ ದಾರಿಯರಿತು ತಕ್ಕ ವ್ಯವಸಾಯಗಳಿಂದ ಸಂಸ್ಕರಿಸಿದರೆ ಸ್ತ್ರೀಯರಂಥಾ ಸ್ಥಿರ ಚಿತ್ತರು, ಸ್ಥಿತಪ್ರಜ್ಞರು, ಪುರುಷರಾಗುವುದು ನಿಧಾನವೆಂದು ಅರಿವಾಗುತ್ತದೆ ಅದೇ ರೀತಿ ಗಿರಿಯಮ್ಮ, ತನ್ನ ಮನಸ್ಸನ್ನು ಬಹಳವಾಗಿ ದಂಡಿಸಿ ಮೈಮನಗಳನ್ನು ಬಗವಂತನಿಗೆ ಅರ್ಪಿಸುವ ಸಲುವಾಗಿ ಸಂಸ್ಕಾರವೆಂಬ ವ್ಯವಸಾಯದಲ್ಲಿ ಮುಂದುವರಿದಿದ್ದಾಳೆ ಜನರ ಅಜ್ಞಾನವನ್ನು ಹೋಗಲಾಡಿಸಲು ಆವಳ ಜನ್ಮವೋ ಎಂಬಂತೆ ಅವಳ ಬಾಳಿನ ಒಂದೊಂದು ಘಟನೆಗಳು ಜೀವನ ಸಾರ್ಥಕತೆಯ ಮೆಟ್ಟಿಲುಗಳಂತಿವೆ

ಮತ್ತೆರಡು ದಿನಗಳು ಸಂದಿವೆ ಅಂದು ಗಿರಿಯಮ್ಮ ದೇವಸ್ಥಾನಕ್ಕೆ ಹೋಗದಂತೆ ಅವಳ ಅತ್ತೆ ಆವಳಿಗೆ ಹೇರು ಕೆಲಸ ಕೊಟ್ಟಿದ್ದಾಳೆ ಶ್ರೀಗಳವರ ಪೂಜಾ ಸಮಯದಲ್ಲಿ ತಾನು ಹೋಗದಿದ್ದುದಕ್ಕಾಗಿ ಗಿರಿಯಮ್ಮ ಮನದಲ್ಲೇ ವ್ಯಥೆಪಡುತ್ತಾ ಮನೆಗೆಲಸದಲ್ಲಿ ತೊಡಗಿದ್ದಾಳೆ

ಇತ್ತ ಶ್ರೀ ಸುಮತೀಂದ್ರ ಶ್ರೀಪಾದಂಗಳವರು ದೇವರ ಪೂಜೆಗೆ ಕುಳಿತಿದ್ದಾರೆ ಅವರ ತುಸುದೂರದಲ್ಲಿಯೇ ಮಂತ್ರಘೋಷಣೆ ಮಾಡುತ್ತಾ ಅವರ ಶಿಷ್ಯಂದಿರು ಕುಳಿತಿದ್ದಾರೆ ಪೂಜಿಸುವಾಗ ಕೈಲಿದ್ದ ತುಳಸೀ ದಳವನ್ನು ಪೀಠದಲ್ಲಿ ಪ್ರತಿಷ್ಠಿತವಾದ ಶ್ರೀ ರಾಮಚಂದ್ರಮೂರ್ತಿಯ ಪಾದಾರವಿಂದದಲ್ಲಿಡಲು ಮೂರ್ತಿಯತ್ತ ಗಮನ ಹರಿಸಿದಾಗ ಪ್ರತಿಷ್ಠಿತವಾದ ಮೂರ್ತಿಯೇ ಕಾಣದಂತಾಗಿದೆ ಶ್ರೀಗಳವರು ಅಪ್ರತಿಬರಾದವರೇ ಜ್ಞಾನದೃಷ್ಟಿ ಹರಿಸಿ ಅತ್ತಿತ್ತ ನೋಡಲಾಗಿ, ಅಂದು ಪೂಜೆಗೆ ಬಾರದೆ, ಮನೆಯಲ್ಲೆ ಉಳಿದ ಗಿರಿಯಮ್ಮನ ಬಳಿಯೇ ಸ್ವಾಮಿಯು ಶಿಶುರೂಪದಲ್ಲಿ ನಲಿದಾಡುತ್ತಿರುವುದು ಅವರಿಗ ಗೋಚರವಾಗಿದೆ ಶ್ರೀಗಳವರು ಆ ಕೂಡಲೇ ಗಿರಿಯಮ್ಮನ ಮನೆಗೆ ಅವಳು ಪೂಜೆಗೆ ಬರುವಂತೆ ಹೇಳಿಕಳುಹಿಸಿದ್ದಾರೆ ಗಿರಿಯಮ್ಮ ಅಲ್ಲಿಗೆ ಬಂದಾಗ ಶ್ರೀಗಳವರು ಅವಳಿಗೆ ಕೈಮುಗಿದು "ಗಿರಿಯಮ್ಮಾ ನೀನು ಮಹಾಬಕ್ತಳು ನಿಜವೇ ಆದರೆ ನಿನ್ನ ಬಕ್ತಿ ಸಂಕೋಲೆಗಳಿಂದ ಶ್ರೀ ಪರಮಾತ್ಮನನ್ನು ವಿಮುಕ್ತಿಗೊಳಿಸಿ ಪೂಜೆಗೆ ಅವಕಾಶ ಮಾಡಿಕೊಡು ತಾಯಿ'' ಎಂದು ನುಡಿದಿದ್ದಾರೆ ಗಿರಿಯಮ್ಮನಿಗೆ ಸಂದರ್ಭದ ಅರಿವಾಗಿದೆ ಅವಳು ತನ್ನ ಕಂಕುಳಿನಲ್ಲಿ ನಲಿಯುತ್ತಿದ್ದ ಶಿಶುರೂಪದ ಪರಮಾತ್ಮನನ್ನು ಮುದ್ದಿಸಿ

ಸ್ವಾಮಿ ನಿನ್ನ ಚರಣ ಕಮಲಗಳ ಸೇವೆ ಎಷ್ಟೇ ಮಾಡಿದರೂ ಈ ಬಕ್ತಳಿಗೆ ಭಕ್ತಿರಸದ ಹಸಿವು ಹಿಂಗದು ಹೀಗೆಂದು ಬಗವಂತನನ್ನು ಕೆಳಗಿಳಿಸಿದ್ದಾಳೆ ಪುನಃ ಸ್ವಾಮಿಯು ಪ್ರತಿರೂಪದಲ್ಲಿ ಪೂಜಾಪೀಠದಲ್ಲಿ ಪ್ರತಿಷ್ಠಿತನಾದಾಗ ಶ್ರೀಗಳವರು ಮತ್ತೆ ಪೂಜೆ ಮುಂದುವರಿಸಿದ್ದಾರೆ

ಶ್ರೀಗಳವರು ಮಲೆಬೆನ್ನೂರಿನಲ್ಲಿ ತಂಗಿರುವವರೆಗೂ ಗಿರಿಯಮ್ಮ ಮಹಾ ಬಗವದ್ಭಕ್ತೆ ಎಂದು ಸರ್ವರಿಗೂ ಮನನ ಮಾಡಿಕೊಟ್ಟು ಮುಂದೆ ಪ್ರಯಾಣ ಸನ್ನದ್ಧರಾಗಿದ್ದಾರೆ

* * * *

ಶ್ರೀರಂಗನಾಥಸ್ವಾಮಿಯ ದೇವಸ್ಥಾನದ ಅರ್ಚಕರು ಪ್ರತಿದಿನವೂ ರಾತ್ರಿಯ ಪೂಜೆಯನ್ನು ಮುಗಿಸಿ ದೇವಸ್ಥಾನದ ಬಾಗಿಲಿಗೆ ಬೀಗ ಹಾಕಿ ಮನೆಗೆ ಹೋಗುತ್ತಿದ್ದರು ಅಂದು ಶ್ರೀರಂಗನಾಥಸ್ವಾಮಿಯ ವಿಶೇಷ ಉತ್ಸವ ನಡೆದಿದೆ ರಾತ್ರಿ ಉತ್ಸವಗಳೆಲ್ಲಾ

ಮುಗಿದು ಅರ್ಚಕರು ಮನೆಗೆ ಹೋದಾಗ ಬಹಳವೇ ಹೊತ್ತಾಗಿದ್ದಿತು ಮರುದಿನ ಅರ್ಚಕರು ಎಂದಿನಂತೆ ತಮ್ಮ ಸ್ನಾನಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ದೇವಸ್ಥಾನದ ಬೀಗ ತೆಗೆದು ಗರ್ಭಗುಡಿಯೊಳಗೆ ಬಂದಿದ್ದಾರೆ ದೇವರ ಮೇಲಿನ ನಿರ್ಮಾಲ್ಯದ ಹೂವುಗಳನ್ನು ತೆಗೆದು ದೇವರ ಅಬಿಷೇಕಕ್ಕಾಗಿ ಸಿದ್ಧತೆ ನಡೆಸುವ ಸಲುವಾಗಿ ದೇವರ ಮೈಮೇಲಿನ ಒಡವೆಗಳೆನ್ನೆಲ್ಲಾ ಪಕ್ಕಕ್ಕೆ ಎತ್ತಿಡುತ್ತಿರುವಾಗ ದೇವರ ಕೈಲಿದ್ದ ಉಂಗುರವೇ ಕಾಣೆಯಾಗಿದೆ ದೇವಸ್ಥಾನಕ್ಕೆ ಹಾಕಿದ್ದ ಬೀಗವು ಇದ್ದಂತೆಯೇ ಇದ್ದು ಇತರ ಒಡಿವೆಗಳೆಲ್ಲಾ ಹಾಗೆಯೇ ಇದ್ದರೂ ಉಂಗುರವು ಮಾತ್ರ ಕಾಣದಾಗಿತ್ತು ಎಲ್ಲಿ ಹುಡುಕಿದರೂ ಉಂಗುರವೇ ಕಾಣದು ಅರ್ಚಕರಿಗೆ ಬಯವೇ ಆಗಿದೆ ಈ ಕಳ್ಳತನದ ಆರೋಪವನ್ನು ತಮ್ಮ ಮೇಲೆ ಎಲ್ಲಿ ಹೊರಸುವರೋ ಎಂಬ ಭಯ ಬೇರೇ ಅವರನ್ನು ಕಾಡುತ್ತಿದೆ ಅವರು ಏನು ಮಾಡಲೂ ತೋರದವರಾಗಿ ನಿಂತಿದ್ದಾರೆ ಅಲ್ಲಿಗೆ ಬಂದ ಭಕ್ತಾದಿಗಳಿಗೆಲ್ಲಾ ವಿಷಯ ಹರಡುತ್ತಿದೆ ಅಷ್ಟರಲ್ಲಿಯೇ ಗಿರಿಯಮ್ಮ ಅಲ್ಲಿಗೆ ಬಂದಿದ್ದಾಳೆ ಆದೇ ತಾನೆ ಕೆರೆಯಲ್ಲಿ ಮಿಂದು ಮಡಿಯುಟ್ಟು ಶ್ರೀರಂಗನಾಥ ಸ್ವಾಮಿಯ ಪೂಜೆಯನ್ನು ಮಾಡಲೋಸುಗ ಕೈಯಲ್ಲಿ ಹೂವಿನ ಬುಟ್ಟಿ ಹಿಡಿದು ಬಂದು ದೇವಸ್ಥಾನದ ಒಳಗೆ ಬಂದು ನಿಂತಿದ್ದಾಳೆ ಅರ್ಚಕರು ಅವಳು ಬರುವ ವೇಳೆಗೆ ದಿನವೂ ಪೂಜೆ ಮುಗಿಸಿ ದೇವರ ಅಲಂಕಾರದಲ್ಲಿ ತೊಡಗಿರುತ್ತಿದ್ದವರು ಇಂದು ಮಂಕಾಗಿ ನಿಂತಿರುವುದು ಕಂಡು ಅವಳು ಅಚ್ಚರಿಯಿಂದ ಅವರನ್ನು ಪ್ರಶ್ನಿಸಿದ್ದಾಳೆ

"ಅರ್ಚಕರು ಇಂದು ಎಂದಿನಂತಿಲ್ಲ ಮೇಲಾಗಿ ಪೂಜೆಯೇ ಆರಂಭವಾಗಿಲ್ಲ ವಿಷಯ ಏನೆಂದು ತಿಳಿಯಬಹುದೇ"

ಅವಳ ಪ್ರಶ್ನೆ ಮುಗಿಯುವ ಮೊದಲೇ ಅರ್ಚಕರು ಅವಳೆದುರಿಗೆ ಕೈ ಮುಗಿದು ನಿಂತರು

"ಅಮ್ಮಾ ಏನು ಹೇಳಲಿ ದೇವರ ಉಂಗುರ ಇದಕ್ಕಿದ್ದಂತೆ ಮಾಯವಾಗಿದೆ ಅದನ್ನು ಕದ್ದವರು ಯಾರೆಂದು ತಿಳಿಯದು"

"ಸ್ವಾಮಿಯ ಮೇಲಿನ ಉಂಗುರು ತೆಗೆದುಕೊಳ್ಳಲು ಯಾವ ನರಮನುಷ್ಯನಿಗೆ ತಾನೇ ಧೈರ್ಯವಿದೆ ಅರ್ಚಕರೇ ಉಂಗುರ ಕಳವಾಗಿಲ್ಲ ತಡೀರಿ" ಗಿರಿಯಮ್ಮ ನಸುನಕ್ಕು ಹೀಗೆ ಹಾಡತೊಡಗಿದ್ದಾಳೆ

ರಾಗ ಸಾರಂಗ ತಾಳ ಕೀನ್‌ಕಾಲ್

ಹೊನ್ನು ತಾ ಗುಬ್ಬಿ ಹೊನ್ನು ತಾ ನಮ್ಮ
ಚಿನುಮಯ ಮೂರುತಿ ಚೆಲುವ ರಂಗನ ಕೈಗೆ || ಪಲ್ಲವಿ ||

ತೂಗಿ ಮಾತಾಡುವ ಸ್ಥೂಲಕಾಯಕನ ಕೈಗೆ |
ಸಾಗರವ ಮಥಿಸಿ ಸುಧೆ ತಂದ ಕೈಗೆ
ತೂಗಿ ಮಾತಾಡುವ ಸ್ಥೂಲಕಾಯನ ಕೈಗೆ
ಸಾಗರ ಪತಿ ನರಸಿಂಹನ ಕೈಗೆ || ೧ ||

ಬಲಿಯ ದಾನವ ಬೇಡಿಕೊಂಡಂಥ ಕೈಗೆ
ಛಲದಿಂದ ಪುತ್ರೇರ ಅಳಿದಂಥ ಕೈಗೆ |
ಗೋವಿಂದ ವಿಭೀಷಣಗ ಭಯವಿತ್ತಾ ಕೈಗೆ |
ಬಲುಬೆಟ್ಟ ಬೆರಳಲ್ಲಿ ಇಟ್ಟಂಥ ಕೈಗೆ || ೨ ||

ಪತಿವ್ರತೆಯರ ವ್ರತವಳಿದಂಥ ಕೈಗೆ |
ಹಿತವಾಜಿಯನೇರಿ ಮರ್ದಿಸಿದಂಥ ಕೈಗೆ ||
ಪತಿ ಶಿರೋಮಣಿ ಲಕ್ಷ್ಮೀಕಾಂತನ ಕೈಗೆ |
ಚತುರ ಹೆಳವನ ಕಟ್ಟೆ ರಂಗನ ಕೈಗೆ || ೩ ||

ಗಿರಿಯಮ್ಮನ ಹಾಡು ಮುಗಿಯುವುದರೊಳಗಾಗಿ ಗುಬ್ಬಿಯೊಂದು ತನ್ನ ಕೊಕ್ಕಿನಿಂದ ಹಿಡಿದು ತಂದ ಉಂಗುರವನ್ನು ಸ್ವಾಮಿಯ ಪಾದದಲ್ಲಿ ಎಸೆದು ಹಾರಿಹೋಯಿತು ಇದನ್ನು ಕಂಡು ಎಲ್ಲರೂ ವಿಸ್ಮಿತರಾಗಿದ್ದಾರೆ ಅರ್ಚಕರಂತೂ ಗಿರಿಯಮ್ಮನ ಕಾಲಿಗೆರಗಿ ತನ್ನ ಕೃತಜ್ಞತೆಯನ್ನರ್ಪಿಸಿದ್ದಾರೆ ಆಗ ಅವಳು ಅವರಿಗೆ ಸ್ವಾಮಿಯು ನಮ್ಮನ್ನು ಕ್ಷಣಕ್ಷಣಕ್ಕೂ ಪರೀಕ್ಷಿಸುತ್ತಾನೆ ಪರೀಕ್ಷೆಗೊಳಗಾದ ಮನುಷ್ಯ ಪುಟವಿಟ್ಟ ಬಂಗಾರದಂತೆ ಪರಿಶುದ್ಧನಾಗುತ್ತಾನೆ ಎಂದು ಉಪದೇಶ ಮಾಡಿದ್ದಾಳೆ ಅವಳ ಉಪದೇಶದಿಂದ ಅರ್ಚಕರಿಗೆ ಮಾತ್ರವಲ್ಲದೆ ಅಲ್ಲಿ ನೆರೆದವರಿಗೆಲ್ಲರಿಗೂ ಕಣ್ಣು ತೆರೆಯಿಸಿದಂತಾಯ್ತು ನಾವು ಎಷ್ಟು ಕಾಲ ಬದುಕಿದೆವೆಂಬುದು ಮುಖ್ಯವಲ್ಲ ಹೇಗೆ ಬಾಳಿದೆವೆಂದು ಮುಖ್ಯ ಬರೀ ಬಾಳುವುದೇ ಅಲ್ಲ ಬಾಳಿದ ಕಾಲದಲ್ಲಿ ನಮ್ಮ ಪಾಪಕರ್ಮವನ್ನು ತೊಳೆಯುವ ಪರಮಾತ್ಮನ ಸೇವೆ, ಪರರ ಸೇವೆಗೆ ಎಷ್ಟು ಬಾಗ ಕಳೆದವು ಎಂಬುದು ಮುಖ್ಯ ಎಂಬುದಾಗಿ ಅಲ್ಲಿರುವವರಿಗೆಲ್ಲಾ ಗಿರಿಯಮ್ಮ

ವಿಷದವಾಗಿ ವಿವರಿಸಿದಾಗ ಅಲ್ಲಿ ನೆರೆದಿರುವವರಿಗೆಲ್ಲಾ ಗಿರಿಯಮ್ಮನನ್ನು ಪರಮಾತ್ಮ ಲೋಕೋದ್ಧಾರಕ್ಕಾಗಿಯೇ ಸೃಷ್ಟಿ ಮಾಡಿರುವನೆಂದು ಅರಿವುಂಟಾಗಿದೆ

* * * *

ಪುಂಗನೂರೆಂಬ ಒಂದು ಸಂಸ್ಥಾನ ರಾಜನ ಮಗನಿಗೆ ಅಕಾರಣವಾಗಿ ಕಣ್ಣುಗಳೆರಡೂ ಹೋಗಿ ಅಂಧತ್ವ ಪ್ರಾಪ್ತವಾಗಿದೆ ರಾಜ ಆಸ್ಥಾನದ ಪಂಡಿತರುಗಳನ್ನೆಲ್ಲಾ ಕರೆಸಿ ಔಷದೋಪಚಾರ ಮಾಡಿಸಿದರೂ ಹುಡುಗನ ಅಂಧತ್ವ ಹೋಗಲಾಡಿಸಲು ಅವರಿಂದ ಸಾಧ್ಯವಾಗಲಿಲ್ಲ ಕೊನೆಗೆ ರಾಜನು ಬೇರೆ ದಾರಿಗಾಣದೆ, ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಯಲ್ಲಿ ಹೋಗಿ ಸೇವೆ ಮಾಡಲಾರಂಬಿಸಿದ ರಾಜನ ಪರಿವಾರವೇ ತಿರುಪತಿಯಲ್ಲಿ ಬಂದು ಬಿಡಾರ ಹೂಡಿ ರಾಜಕುಮಾರನ ಸಲುವಾಗಿ ದೇವರ ಸೇವೆ ನಡೆಸುತ್ತಿದ್ದಾರೆ ಹೀಗಿರುವಲ್ಲಿ ಒಂದು ದಿನ ರಾಜನ ಕನಸಿನಲ್ಲಿ ವೆಂಕಟಾಚಲಪತಿಯು ಕಾಣಿಸಿಕೊಂಡು ಅಯ್ಯಾ ನಿನ್ನ ಮಗನ ಒಂದು ಕಣ್ಣನ್ನು ನಾನು ಕರುಣಿಸಿದ್ದೇನೆ ಇನ್ನೊಂದು ಕಣ್ಣಿಗಾಗಿ ನೀನು ಕೊಮಾರನ ಹಳ್ಳಿಗೆ ಹೋಗು ಅಲ್ಲಿ ನನ್ನ ಮಹಾ ಬಕ್ತೆಯಾದ ಗಿರಿಯಮ್ಮನೆಂಬುವಳೊಬ್ಬಳಿದ್ದಾಳೆ ಅವಳು ಪ್ರತಿದಿನವೂ ತನ್ನ ಊಟಕ್ಕಾಗಿ ಬಡಿಸಿದ ತುಪ್ಪವನ್ನು ಎತ್ತಿಟ್ಟು ನನ್ನ ಮೂರ್ತಿಯ ಮುಂದೆ ದೀವಿಗೆಯನ್ನು ಬೆಳಗಿಸುತ್ತಾಳೆ ಆ ಮಂಗಲ ಜ್ಯೋತಿಯ ಕಪ್ಪನ್ನು ನಿನ್ನ ಮಗನ ಕಣ್ಣಿಗೆ ಹಚ್ಚಿದರೆ ಆತನಿಗೆ ಇನ್ನೊಂದು ಕಣ್ಣು ಬರುವುದು'' ಎಂದು ನುಡಿದು ಅದೃಶ್ಯನಾದನು ಮರುದಿನ ಬೆಳಕು ಹರಿಯುವುದನ್ನೇ ಕಾದಿದ್ದು, ರಾಜನು ತನ್ನ ಪರಿವಾರದೊಡನೆ ಕುಮಾರನ ಹಳ್ಳಿಗೆ ಬಂದಿದ್ದಾನೆ ಸ್ವಾಮಿಯ ಪ್ರೇರಣಾನುಸಾರ ರಾಜಕುಮಾರನಿಗೆ ಬೆಳಕು ಹರಿಯುವ ವೇಳೆಗೆ ಪರಮಾತ್ಮನು ಒಂದು ಕಣ್ಣಿನ ದೃಷ್ಟಿಯನ್ನು ಪರಿಪಾಲಿಸಿದ್ದನು ರಾಜನು ಗಿರಿಯಮ್ಮನನ್ನು ಕಾಣಲು ಬಂದಿರುವ ಸಂಗತಿ ತಿಳಿದು ಗಿರಿಯಮ್ಮನ ಮನೆಯವರಿಗೆಲ್ಲಾ ಆಚ್ಚರಿಯಾಗಿದೆ ಆದರೆ ತ್ಯಾಗಮಯಿಯಾದ ಗಿರಿಯಮ್ಮನಿಗೆ ಯಾವ ಬಗೆಯ ಚಿತ್ತ ವಿಕಾರವೂ ಆಗಿಲ್ಲ ಆ ಪರಮಾತ್ಮನ ಮಂಗಳಮೂರ್ತಿಯನ್ನೇ ಸದಾಕಾಲ ಮನದಲ್ಲಿ ಧ್ಯಾನಿಸುತ್ತಾ ಅವನ ದಿವ್ಯಸ್ವರೂಪವನ್ನು ಕಾಣುವ ಅವಳಿಗೆ ರಾಜನ ಆಗಮನದಿಂದ ಯಾವ ವೈಪರೀತ್ಯವೂ ಕಂಡುಬಂದಿಲ್ಲ ಶಾಂತಚಿತ್ತಳಾಗಿಯೇ ರಾಜನ ಪರಿವಾರದವರನ್ನು ಬರಮಾಡಿಕೊಂಡಿದ್ದಾಳೆ ರಾಜನು ತಾನು ಬಂದ ಕಾರಣವನ್ನು ಅವಳಿಗೆ ತಿಳಿಸಿ

"ಅಮ್ಮಾ ಆ ಪರಮಾತ್ಮ ನನ್ನ ಮಗನಿಗೆ ಒಂದು ಕಣ್ಣಿನ ದೃಷ್ಟಿಯನ್ನಿತ್ತಿದ್ದಾನೆ ಆತನ ಪ್ರೇರಣಾನುಸಾರ ಮತ್ತೊಂದು ಕಣ್ಣಿನದಾನಕ್ಕಾಗಿ ನಿನ್ನಲ್ಲಿಗೆ ಬಂದಿದ್ದೇನೆ ನನ್ನ ಮಗನಿಗೆ ಮತ್ತೊಂದು ಕಣ್ಣಿನ ದೃಷ್ಟಿ ನೀಡಿ ನಮ್ಮನ್ನು ಪುನೀತನನ್ನಾಗಿ ಮಾಡಮ್ಮಾ ತಾಯಿ'' ಎಂದು ಗಿರಿಯಮ್ಮನಿಗೆ ನಮಸ್ಕಾರವನ್ನೇ ಮಾಡಿದ್ದಾನೆ ರಾಜ

ಗಿರಿಯಮ್ಮನಿಗೆ ವಿಷಯವೆಲ್ಲಾ ತಿಳಿದಿದೆ ಅವಳು ಪರಮಾತ್ಮನ ಆಜ್ಞೆಯಂತೆ ದೀವಿಗೆಯ ಕಾಡಿಗೆಯನ್ನು ತೆಗೆದು ರಾಜನ ಮಗನ ಕಣ್ಣಿಗೆ ಹಚ್ಚಿ ಹಾಡತೊಡಗಿದ್ದಾಳೆ

ರಾಗ ರೇಗುಪ್ತಿ (ಆನಂದಭೈರವಿ) ತಾಳ ರೂಪಕ (ದೀಪಚಂದಿ)

ಅರುಹ ಬಾರದೆ ನಿಮ್ಮ ಚರಿತೆಯನು ।
ನರಲೋಕಕೆ ನಗೆ ಗೀಡು ಮಾಡದ ಹಾಂಗೆ ॥ ಪಲ್ಲವಿ ॥

ಕಲ್ಲೊಳು ಕಾಂತೆಯ ಮಾಡಿದೆ ಎಂದು ।
ಹೇಳುತಲಿಹರು ಮೂಜಗದೊಳಗೇ । ಅಲ್ಲಿ ತೋರಿದ ಹಾಂಗೆ ।
ಇಲ್ಲಿ ತೋರಿಸಿದರೆ — ಬಲ್ಲದೆನ್ನೊಡೆಯ ।
ದೊಡ್ಡವನೆಂದು ಪೊಗಳುವೆ ನಾ ॥ ೧ ॥

ತ್ರಿಭಂಗಿಯಾಗಿದ್ದ ಕುಬ್ಜೆಯ ತನು ಎತ್ತಿ ।
ನವಯುವ್ವನೆಯ ಮಾಡಿದೆಯೆಂಬರು ।
ಬಹು ಪರಾಕ್ರಮವನ್ನು ಈಗ ತೋರಿಸಿದರೆ ।
ಆಹುದೋ ಎನ್ನೊಡೆಯ ದೊಡವನೆಂದು ಸಾಪೆನಾ ॥ ೨ ॥

ನೀನೇ ಗತಿ ಎಂದು ನಂಬಿದ ಭಕ್ತನ ಕಣ್ಣೂನವ
ತಿದ್ದಿ ನಿಜವ ತೋರಿಸಯ್ಯ ॥
ದೀನದಯಾಳು ಹೆಳವನ ಕಟ್ಟೆ ರಂಗಯ್ಯಾ ।
ದಾನಿ ಎನ್ನೊಡೆಯ ದೊಡ್ಡವನೆಂದು ಹೇಳುವೆ ನಾ ॥ ೩ ॥

ಗಿರಿಯಮ್ಮನ ಪ್ರಾರ್ಥನೆ ದೇವರಿಗೆ ಮುಟ್ಟಿತೆಂಬಂತೆ ರಾಜನ ಮಗನ ಇನ್ನೊಂದು ಕಣ್ಣಿನ ಅಂಧತ್ವವೂ ಹೋಗಿ ದೃಷ್ಟಿ ಬಂದಿದೆ ರಾಜನಿಗೆ ಇದರಿಂದ ಮಹದಾನಂದವಾಗಿ ಅವನು ಗಿರಿಯಮ್ಮನಿಗೆ ಧನಕನಕ, ಭೂಮಿ ಕಾಣೆಯನ್ನು,

ಕಾಣಿಕೆಯಾಗಿ ಕೊಡಲು ಬಂದಾಗ ಗಿರಿಯಮ್ಮ ಶ್ರೀ ರಂಗನಾಥ ಸ್ವಾಮಿಯ ಕಾಣಿಕೆಯಾಗಿ ಅದನ್ನು ಸ್ವೀಕರಿಸುವುದಾಗಿ ಹೇಳಿ ರಾಜನ ಕಾಣಿಕೆಯಿಂದ ಭವ್ಯವಾದ ದೇವಸ್ಥಾನ, ದೇವಸ್ಥಾನದ ಸುತ್ತಲೂ ಪ್ರಕಾರ ಮತ್ತು ನಿತ್ಯ ಪೂಜೆಗಾಗಿ ಸಿದ್ಧತೆಗಳನ್ನು ನಡೆಸುವಂತೆ ರಾಜನಿಗೆ ಆದೇಶವಿತ್ತಿದ್ದಾಳೆ ಗಿರಿಯಮ್ಮನ ಆಜ್ಞೆಯನ್ನು ನಡೆಸಿ ರಾಜನು ಹೊರಟು ಹೋದನಂತರ, ಗಿರಿಯಮ್ಮನ ಮನೆಯವರು ರಾಜನು ನೀಡುವ ಅಪಾರ ಆಸ್ತಿಯನ್ನು ಗಿರಿಯಮ್ಮ ತಿರಸ್ಕರಿಸಿದ್ದುದಕ್ಕಾಗಿ ಹಲುಬುತ್ತಾ ತನಗಿಲ್ಲದಿದ್ದರೂ ಗಿರಿಯಮ್ಮ ಮನೆಯವರಿಗಾದರೂ ಆಸ್ತಿ ಸ್ವೀಕರಿಸಬಾರದಾಗಿತ್ತೇ ಎಂದು ಅವಳನ್ನು ಶಪಿಸುತ್ತಿದ್ದಾರೆ ಆದರೆ ಪರಮಾತ್ಮನು ಗಿರಿಯಮ್ಮನಿಗೆ ಅಪಾರವಾದ ಆನಂದವನ್ನು ನೀಡಿ ತಾನು ಭಕ್ತರ ಅಬಿಮಾನಿಯೇ ಎಂಬುದಾಗಿ ಅವಳಿಂದಲೇ ಸಾಬೀತುಪಡಿಸುತ್ತಿದ್ದಾನೆ ಅವಳ ಮನೆಯವರಿಗಾದರೋ ಗಿರಿಯಮ್ಮ ದೈವಾಂಶಸಂಭೂತಳು ಎಂದರಿವಾದರೂ ಅವಳ ತ್ಯಾಗವಾಗಲೀ, ದೈವಭಕ್ತಿಯಾಗಲೀ, ಅವರಲ್ಲಿ ಬಿಂಬಿತವಾಗಲು ಅವರು ತೀರಾ ಅಶಕ್ತರಾಗಿದ್ದರು ಅವರ ಬಗ್ಗೆ ಗಿರಿಯಮ್ಮನಿಗೆ ಕರುಣೆಯೇ ವಿನಃ ಕೋಪವಿಲ್ಲ

ಮತ್ತೊಂದು ದಿನ ಅಂದು ಗಿರಿಯಮ್ಮ ರಂಗನಾಥಸ್ವಾಮಿಯ ದೇವಾಲಯದಲ್ಲಿ ಕುಳಿತು ದೇವರ ಸೇವೆ ಮಾಡುತ್ತಿದ್ದಳು ನೆರೆ ಹಳ್ಳಿಯ ದಿಬ್ಬದ ಪಟೇಲನಾದ ರಂಗಪ್ಪ ತನ್ನ ಸತ್ತ ಮಗುವಿನ ಕಳೇಬರವನ್ನು ತಂದು ಗಿರಿಯಮ್ಮನ ಮುಂದಿರಿಸಿ ಅಳುತ್ತಾ ನಿಂತಿದ್ದಾಳೆ

"ತಾಯಿ ಈ ಮಗು ನಿನ್ನ ಕೃಪಾಕಟಾಕ್ಷದಿಂದ ಹುಟ್ಟಿದ ನನ್ನ ಮಗು ಆದರೆ ನನ್ನ ದುರುದೃಷ್ಟದಿಂದ ಮರಣವನ್ನಪ್ಪಿದೆ ನನಗೆ ಈಗ ಬೇರೆ ಯಾವ ಮಕ್ಕಳೂ ಇಲ್ಲ ಹೀಗಾಗಿ ನನ್ನ ಮನೆಯ ದೀಪದ ಕುಡಿಯೂ ಆರಿತು ಈಗ ನೀನೇ ರಕ್ಷಿಸಬೇಕು "

ಬಂದನ ರೂಪದಿಂದ ಒದಗಿದ ವಿವಾಹವನ್ನು ಸಂಸ್ಕಾರ ಬಲದಿಂದ ಬಿಡುಗಡೆ ಮಾಡಿಕೊಂಡು ಪತಿಯಾದ ತಿಪ್ಪರಸನಿಗೆ ಮರುಮದುವೆ ಮಾಡಿಸಿ, ತನ್ನ ಜೀವನವನ್ನು ದೇವರನಾಮ, ಕೀರ್ತನೆ ಕಾವ್ಯಗಳ ರಚನೆ ಹಾಗೂ ಜನತೆಯ ಸೇವೆಗೆ ಮೀಸಲಾಗಿಟ್ಟಿರುವ ಗಿರಿಯಮ್ಮನ ಭಕ್ತರ ಗುಂಪು ಅಪಾರ ಜನತೆಯೇ ಅವಳ

ಸಂಸಾರ ರಂಗಪ್ಪನು ತನ್ನ ಮುಂದೆ ತಂದಿರಿಸಿದ ಅವನ ಸತ್ತ ಮಗುವಿನ ಕಳೇಬರವನ್ನು ನೋಡಿ ಗಿರಿಯಮ್ಮ ಅದನ್ನು ದೇವರ ಮುಂದಿಟ್ಟು ಪ್ರಾರ್ಥಿಸ ತೊಡಗಿದಳು

ರಾಗ ಪೂರ್ವಿ (ಬಸಂತ ಬಹಾರ್) ತಾಳ ಆದಿ (ಝಂಪ)

ಪದುಮನಾಭನೆ ನಿನ್ನ ಪಾದಕಿಂಕರ ನನ್ನ ।
ಕೈಬಿಡುವುದುಚಿತವೇ ರಂಗಾ ॥ ಪಲ್ಲವಿ ॥

ಮುದದಿಂದ ನಿನ್ನ ಪಾದಕೆರಗುವೆ ನಾನು ।
ತ್ವರಿತದಿ ನೀ ಕಾಯೋ ಎನ್ನೊಡೆಯ ರಂಗಾ ॥ ಅನು ಪಲ್ಲವಿ ॥

ಅಜಗರ ಶಿಯನನೇ ಬುದಜನ ನಮಿತನೇ ।
ತ್ರಿಜಗ ವಂದಿತಪಾದ ಪದುಮ ಜನಕನೇ ॥ ೧ ॥

ಶಿಶು ಅವತಾರದಿ ಪಳುಗಳ ಸಲಹಿದೆ ।
ಶಶಿಭೂಷಣ ಸಖಾ ಶಿಶುವ ಕಾಪಾಡೋ ॥ ೨ ॥

ಸಾಂದೀಪಗನಿಗೊಲಿದೆ ಸಂದೇಹವಿಲ್ಲದೇ
ತಂದೆ ಹೆಳವನ ಕಟ್ಟೆ ರಂಗ ಕೃಪಾಂಗ ॥ ೩ ॥

ಎಂತೆಂದು ಅನನ್ಯ ಭಕ್ತಿಯಿಂದ ಗಿರಿಯಮ್ಮ ಪ್ರಾರ್ಥಿಸುತ್ತಿರಲಾಗಿ ನಿದ್ದೆ ಮಾಡಿದ ಮಗು ಎದ್ದು ಅಳುವಂತೆ ಆ ಮಗುವು ಎದ್ದು ಅಳತೊಡಗಿದೆ ರಂಗಪ್ಪನಿಗೆ ಆನಂದದಿಂದ ಬಾಯಲ್ಲಿ ಮಾತೇ ಹೊರಡದಾಗಿದೆ ಅವನು ಗಿರಿಯಮ್ಮನಿಗೆ ಧೀರ್ಘದಂಡನೆಯ ಪ್ರಣಾಮ ಮಾಡಿದ್ದಾನೆ ಅಲ್ಲಿ ನೆರೆದಿರುವವರಿಗೆಲ್ಲಾ ಗಿರಿಯಮ್ಮನ ಭಗವದ್ಭಕ್ತಿಯ ಅರಿವಾಗಿದೆ ಅವರೆಲ್ಲರೂ ಅವಳಿಗೆ ಕೈಮುಗಿದು ನಿಂತಿದ್ದಾರೆ

ಜೀವನದ ಯಾವ ಸಮಸ್ಯೆಗೂ ಪರಿಹಾರ ಪರಮಾತ್ಮನ ಅನುಗ್ರಹ ಮಾತ್ರದಿಂದಲೇ ಸಾಧ್ಯವೆಂಬುದನ್ನು ಗಿರಿಯಮ್ಮ ಎಲ್ಲರಿಗೂ ತೋರಿಸಿ ಕೊಟ್ಟಿದ್ದಾಳೆ

* * * *

ಕ್ರಮೇಣ ಗಿರಿಯಮ್ಮನ ಮನೆಯವರಿಗೆಲ್ಲಾ ಅವಳ ಬಗ್ಗೆ ಇದ್ದ ಅಲ್ಪ ಸ್ವಲ್ಪ ಉದಾಸೀನತೆಯೂ ಮಾಯವಾಗಿ ಅವರಿಗೆಲ್ಲ ಅವಳ ಪವಿತ್ರ ಜೀವನದ ಬಗ್ಗೆ ಅರಿವುಂಟಾಗಿದೆ ಇದರಿಂದಾಗಿ ಪಶ್ಚಾತ್ತಾಪಗೊಂಡ ಅವಳ ಅತ್ತೆ, ವಾರಗಿತ್ತಿಯರು, ಅವಳಲ್ಲಿ ಕ್ಷಮೆಯಾಚಿಸಿ ಪೂಜ್ಯಭಾವನೆ ತಳೆದಿದ್ದಾರೆ

ಅಂದು ಬೆಳಗ್ಗೆ ಗಿರಿಯಮ್ಮ ತನ್ನ ಎಲ್ಲ ಕೆಲಸವನ್ನೂ ಮುಗಿಸಿ ದೇವಸ್ಥಾನಕ್ಕೆ ಹೋಗಿ ಶ್ರೀ ರಂಗನಾಥಸ್ವಾಮಿಯ ಪೂಜೆ ಮುಗಿಸಿಕೊಂಡು ಬಂದಿದ್ದಾಳೆ ಹಿತ್ತಲಲ್ಲಿನ ಸೆಗಣಿ ರಾಶಿಯನ್ನು ಅವಳಿಗೆ ತೋರಿಸಿ ಅವಳ ಅತ್ತೆ ಅದನ್ನು ತಟ್ಟುವಂತೆ ಹೇಳಿದಾಗ ಗಿರಿಯಮ್ಮ ಅತ್ತೆ ತನ್ನ ಮೇಲೆ ಇತ್ತೀಚೆಗೆ ವಿಶ್ವಾಸದಿಂದ ವರ್ತಿಸ ತೊಡಗಿರುವುದರಿಂದ ಸಂತೋಷದಿಂದಲೆ ಬೆರಣಿ ತಟ್ಟಲು ಕುಳಿತಿದ್ದಾಳೆ ಅಷ್ಟರಲ್ಲಿಯೇ ಹರಿನಾಮಸ್ಮರಣೆಯು ಅವಳ ಕಿವಿ ತಟ್ಟಿದೆ ತಿರುಪತಿ ಯಾತ್ರೆಗೆ ಹೊರಟ ಭಜನೆ ಗುಂಪೊಂದು ಅದೇ ಮಾರ್ಗವಾಗಿ ಭಜನೆ ಮಾಡುತ್ತಾ ಮುಂದಕ್ಕೆ ಸಾಗಿರುವಾಗ ಗಿರಿಯಮ್ಮನಿಗೆ ತಾನು ಮಾಡುತ್ತಿರುವ ಕೆಲಸವೂ ಮರೆತಂತಾಗಿ, ಅವಳೂ ಭಜನೆ ಮಾಡುತ್ತಾ ಆ ಗುಂಪಿನೊಂದಿಗೆ ಸೇರಿ ಮುಂದೆ ಮುಂದೆ ಹೊರಟಿದ್ದಾಳೆ ಮನೆಯಲ್ಲಿ ಹೇಳದೇ, ಕೇಳದೇ, ಭಕ್ತಿಯ ಆವೇಶದಲ್ಲಿ ಗಿರಿಯಮ್ಮ ಯಾತ್ರಿಕರ ಸಮೂಹದೊಡನೆ ತನ್ನ ದರುಶನಕ್ಕಾಗಿ ಬಂದಿದ್ದಾಳೆ ಆದುದರಿಂದ ತನ್ನ ಭಕ್ತಳ ಮೇಲೆ ಯಾವ ಬಗೆಯ ಅಪವಾದಕ್ಕೂ ಅವಕಾಶ ಕೊಡಕೂಡದೆಂದು ಶ್ರೀ ಶ್ರೀನಿವಾಸನೇ ಗಿರಿಯಮ್ಮನ ರೂಪದಲ್ಲಿ ಬೆರಣಿ ತಟ್ಟುವ ಕೆಲಸ ಮುಂದುವರಿಸಿದ್ದು ಅವಳ ಮನೆಯಲ್ಲಿ ಅವಳ ಪಾಲಿನ ಕೆಲಸವನ್ನೆಲ್ಲಾ ಅವಳ ರೂಪದಿಂದಲೇ ನಿರ್ವಹಿಸುತ್ತಿದ್ದಾನೆ ಪರಮಾತ್ಮನೆ ಸ್ವಹಸ್ತದಿಂದ ಸಿದ್ಧಪಡಿಸಿದ ಪಾಕವನ್ನು ಉಂಡ ಗಿರಿಯಮ್ಮನ ಮನೆಯವರಿಗೆಲ್ಲಾ ಅಮೃತಪಾನ ಮಾಡಿದಂತಾಗಿ ಒಂದು ತುತ್ತು ಊಟ ಮಾಡಿದರೆ, ಮಿತಿಮೀರಿದ ತೃಪ್ತಿ ಕಂಡುಬಂದಿದೆ

ಸಜ್ಜನರ ಜತೆಯಲ್ಲಿ ದುರ್ಜನರು ಸೇರಿದರೆ ಅವರ ಪಾಪ ವಿಶೇಷ ಕಡಿಮೆಯಾಗುವುದುಂಟು, ಹೂವಿನಿಂದ ದಾರವೂ ದೇವರ ಪಾದಾರವಿಂದವನ್ನು ಸೇರುವಂತೆ ಗಿರಿಯಮ್ಮನಂತಹ ಭಗವದ್ಭಕ್ತೆಯು ಕೃಷ್ಣಪ್ಪನವರ ಮನೆ ಸೇರಿದುದರಿಂದ ಅವಳ ಮೂಲಕ ಅಪರೋಕ್ಷವಾಗಿ ಅವರಿಗೆಲ್ಲಾ ಪರಮಾತ್ಮನ ಅನುಗ್ರಹವಾಗಿದೆ ತಾನು ಭಕ್ತರ ಇಚ್ಚೆಗದೀನನಲ್ಲದೆ ಸ್ವತಂತ್ರನಲ್ಲಾ ಎಂಬುದಾಗಿ ಸಾಬೀತುಪಡಿಸುವ

ಸಲುವಾಗಿ ಆ ಪರಮಾತ್ಮ ಗಿರಿಯಮ್ಮನಿಗಾಗಿ, ಅವರ ಮನೆಯವರ ಸೇವೆ ಮಾಡಿದ್ದಾನೆ ಇತ್ತ ಯಾತ್ರಿಕರ ಗುಂಪಿನ ಜತೆ ಹೊರಟ ಗಿರಿಯಮ್ಮ ತನಗೆ ತೃಪ್ತಿಯಾಗುವವರೆಗೂ ತಿರುಪತಿಯ ತಿಮ್ಮಪ್ಪನ ಸೇವೆ ನಡೆಸಿ ಪರಮಾತ್ಮನ ಮೂರ್ತಿಯನ್ನು ತನ್ನ ತನು ಮನಗಳಲ್ಲಿ ತುಂಬಿಕೊಂಡು ಮತ್ತ ಹಿಂತಿರುಗಿದ್ದಾಳೆ ತಾನು ಹೇಳದೇ ಕೇಳದೇ ಹೊರಟು ಹೋದುದಕ್ಕಾಗಿ ಪಶ್ಚಾತ್ತಾಪ ಪಡುತ್ತಾ ಅತ್ತೆ ಮಾವಂದಿರ ಬಳಿ ಬಂದು ಕ್ಷಮಾಪಣೆ ಬೇಡಿದ್ದಾಳೆ ಅವರಿಗೆ ಸೊಸೆಯ ಮಾತಿನಿಂದ ಅಚ್ಚರಿಯಾಗಿ ಅವರು ಅವಳಿಗೆನ್ನುತ್ತಿದ್ದಾರೆ

"ನೀನು ಎಲ್ಲಿ ಹೋಗಿದ್ದೆ ಗಿರಿಯಮ್ಮಾ ಇಲ್ಲೇ ಇದ್ದುಕೊಂಡು ನಿತ್ಯವೂ ಮನೆಗೆಲಸವನ್ನೆಲ್ಲಾ ಮಾಡುತ್ತಲೇ ಇರುವೆಯಲ್ಲಾ ಹಸುವಿನ ಹಾಲು ಕರೆಯುವ ಕೆಲಸ, ಬೆರಣಿ ತಟ್ಟುವ ಕೆಲಸ, ರಾತ್ರಿಯ ಅಡಿಗೆ, ನಿನ್ನ ಪಾಲಿನ ಯಾವ ಕೆಲಸವೂ ನಿಂತಿಲ್ಲ ನೀನು ಹೋಗಿದ್ದಾದರೂ ಎಲ್ಲಿಗೆ ?"

ಅತ್ತೆ ಮಾವಂದಿರ ಮಾತು ಕೇಳಿ ಗಿರಿಯಮ್ಮನಿಗೆ ಸಂದೇಹವಾಗಿದೆ ಅವಳು ಮನೆಯ ಹಿತ್ತಿಲಿಗೆ ಹೋಗಿ ಬೆರಣಿಗಳ ರಾಶಿಯನ್ನು ನೋಡಿದ್ದಾಳೆ ಬೆರಣಿಯನ್ನು ಕೈಗೆತ್ತಿಕೊಂಡು ಅದನ್ನು ಪರಿಶೀಲಿಸಿ ನೋಡಿದಾಗ ಬೆರಣಿಗಳ ಮೇಲೆಲ್ಲಾ ಸ್ವಾಮಿಯ ಹಸ್ತದ ಶುಬರೇಖೆಗಳು ಕಾಣುತ್ತಿವೆ ಗಿರಿಯಮ್ಮ ಸ್ವಾಮಿಯು ತನಗಾಗಿ ಮಾಡಿದ ದಾಸವೃತ್ತಿಯನ್ನು ನೆನೆದು ಆನಂದಬಾಷ್ಪ ಸುರಿಸುತ್ತಿದ್ದಾಳೆ ಪರಮಾತ್ಮನ ಮಹಿಮೆಯನ್ನು ಕೊಂಡಾಡುತ್ತಾ ಹಾಡತೊಡಗಿದ್ದಾಳೆ

ರಾಗ ಆನಂದಭೈರವಿ

ಘನ ಮಹಿಮ ನೀನಯ್ಯ ಶ್ರೀ ರಂಗನಾಥನೇ
ಏನು ಅಭಿಮಾನವೋ ಭಕ್ತರಲಿ ನಿನಗೆ
ಎನಗಾಗಿ ಓ ಸ್ವಾಮಿ ಎಂಥ ಸೇವೆಯಗೈದೆ
ಈ ನಿನ್ನ ಕೊತ್ತಿನಾ ಶೀಲ ಉಳಿಸಲಿಕ್ಕೆ || ೧ ||

ಆಳಾಗಿ ದುಡಿದೆನ್ನ ಕೆಲಸವನ್ನು ಗೈದೆಯಾ
ಹೇಳು ಹೇಳಯ್ಯ ನೀ ಎನಿತೊಂದು ದಣಿದೇ
ಕೇಳ ಬಲ್ಲೆ ನೀ ನರನ ಕುದುರೆ ಬೆನ್ನುಜ್ಜಿದನು
ಸಲೆ ನಿನ್ನ ವಾತ್ಸಲ್ಯ ಕಣ್ಣಾರ ಕಂಡೆ || ೨ ||

ಕಡುಪಾಪಿ ನಾನಯ್ಯ ಒಡೆಯ ನೀ ಓ ಸ್ವಾಮಿ ।
ಕಡು ಜಡವೆ ನಾನಹುದು ಶಿರಿಯರಸ ನೀನು ।
ನುಡಿಯು ನಿಂತಿದೆ ಎನಗೆ ನಿನ್ನ ಪೊಗಳಲು ದೇವ
ಒಡೆಯ ಶ್ರೀ ಪರಮೇಶದಾಸಳು ಹರಸೊ ॥ ೩ ॥

ಗಿರಿಯಮ್ಮನು ತಿರುಪತಿಗೆ ಹೋಗಿದ್ದರೂ ಅವಳ ರೂಪದಲ್ಲೇ ಅವರ ಮನೆಯಲ್ಲಿ ಬಂದು ಪರಮಾತ್ಮನೇ ಮನೆಗೆಲಸವನ್ನೆಲ್ಲಾ ಮಾಡಿದ್ದಾನೆ ಎಂಬುದಾಗಿ ಎಲ್ಲರಿಗೂ ತಿಳಿದುಬಂದಿದೆ

ಹೀಗೆಯೇ ಇರುವಲ್ಲಿ ಒಂದು ಬಾರಿ ಆ ಪ್ರಾಂತದಲ್ಲಿ ಬಯಂಕರ ಬರಗಾಲವು ಬಂದಿದೆ ಮಳೆ ಇಲ್ಲದೆ ಕೆರೆ ಬಾವಿಗಳೆಲ್ಲಾ ಬತ್ತಿ ನಿರ್ಜಲವಾಗಿದೆ ದನಕರುಗಳು ಮೇವು, ನೀರು ಇಲ್ಲದೆ ಕಂಗಾಲಾಗಿವೆ ಎಲ್ಲೆಲ್ಲಿಯೂ ಹಾಹಾಕಾರ, ಬೀಕರ ಕ್ಷಾಮ, ಒದಗಿದ ಕಾರಣ ಪಂಡಿತರುಗಳೆಲ್ಲಾ ಸೇರಿ ರಂಗನಾಥ ಸ್ವಾಮಿಯ ದೇವಸ್ಥಾನದ ಆವರಣದಲ್ಲಿಯೇ ವೇದಘೋಷಗಳಿಂದ ಕೂಡಿದ ಹವನ ಹೋಮಗಳನ್ನು ನಡೆಸಿದ್ದಾರೆ ಆದರೆ ವರುಣದೇವ ಯಾವುದಕ್ಕೂ ಮಣಿಯದೆ ಸ್ಥಬ್ದನಾಗಿದ್ದಾನೆ

ಗಿರಿಯಮ್ಮನನ್ನು ಆಶ್ರಯಿಸಬೇಕೇ ವಿನಃ ಬೇರೆ ದಾರಿಯಿಲ್ಲ ಎಂದು ಕೊನೆಗೆ ಪಂಡಿತರುಗಳೆಲ್ಲಾ ಅವಳ ಬಳಿಗೆ ಬಂದು ಅವಳಲ್ಲಿ ಪ್ರಾರ್ಥಿಸತೊಡಗಿದ್ದಾರೆ

"ಅಮ್ಮಾ ತಾಯಿ ನಾವು ನಮಗೆ ತಿಳಿದ ಮಂತ್ರ ತಂತ್ರಗಳನ್ನೆಲ್ಲಾ ಬಳಸಿದೆವು ಆದರೆ ಆ ವರುಣದೇವನಿಗೆ ಕನಿಕರ ಬಂದಿಲ್ಲ ಜನರು, ಪಶುಪಕ್ಷಿಗಳು, ನೀರು ನಿಡಿಯಿಲ್ಲದೆ ಕಂಗಾಲಾಗಿದ್ದಾರೆ ಇನ್ನು ಹೆಚ್ಚು ಪರೀಕ್ಷೆ ಮಾಡಬೇಡ ತಾಯಿ ನಾವು ನಮ್ಮ ಅಹಂಕಾರದಿಂದ ನಿನ್ನನ್ನು ಕೇಳದೆಯೇ ಹವನ ಹೋಮ ಆರಂಬಿಸಿದೆವು ಆದರೆ ನಿನ್ನ ಭಕ್ತಿಯ ಮುಂದೆ ನಮ್ಮದು ತೃಣಕ್ಕೆ ಸಮಾನ ಎಂದರಿವಾಗಿದೆ ನಮ್ಮನ್ನು ಕ್ಷಮಿಸಿ ಆ ಪರಮಾತ್ಮನಲ್ಲಿ ಮೊರೆಯಿಟ್ಟು ಮಳೆ ಬರುವಂತೆ ಮಾಡು ಈ ಮಹಾಸಾಹಸ ನಿನ್ನಿಂದಲೇ ಸಾಧ್ಯ" ಗಿರಿಯಮ್ಮ, ಪಂಡಿತರುಗಳತ್ತ ದೃಷ್ಟಿಹಾಯಿಸಿ ನಕ್ಕು, ನುಡಿದಿದ್ದಾಳೆ

"ನಾಳೆ ಬೆಳಗ್ಗೆ ದೇವಸ್ಥಾನದಲ್ಲಿ ಪೂಜೆಯಾದ ನಂತರ, ಶ್ರೀ ರಂಗನಾಥ ಸ್ವಾಮಿಯಲ್ಲಿ ಪ್ರಾರ್ಥಿಸುತ್ತೇನೆ ಪ್ರಯತ್ನ ನನ್ನದು"

ಮರುದಿನ ಬೆಳಕು ಹರಿದೀತೇ ತಮ್ಮ ಸಮಸ್ಯೆ ಬಗೆಹರಿಯುವುದೇ ಎಂಬ ಆತಂಕದಿಂದ ಅಂದು ರಾತ್ರಿಯೆಲ್ಲಾ ಊರಿನವರು ಜಾಗರಣೆ ಮಾಡಿದ್ದಾರೆ ಗಿರಿಯಮ್ಮ ಎಂದಿನಂತೆ ನಸುಕಿನಲ್ಲಿಯೇ ಎದ್ದು ಮೈತೊಳೆದು ಗೋ ಸೇವೆಯನ್ನು ಮುಗಿಸಿ ದೇವಸ್ಥಾನಕ್ಕೆ ಹೊರಟಿದ್ದಾಳೆ

ದೇವಸ್ಥಾನದ ಮುಂದೆ ಊರಿನ ಮಂದಿಯೆಲ್ಲಾ ನೆರೆದಿದ್ದಾರೆ ಗಿರಿಯಮ್ಮ ಮಡಿಯುಟ್ಟು ದೇವಸ್ಥಾನದ ಒಳಗೆ ಹೋಗಿ ಪರಮಾತ್ಮನನ್ನು ಬಕ್ತಿಯಿಂದ ಪೂಜಿಸಿ ಮಳೆಬರಿಸುವಂತೆ ಶ್ರೀರಂಗನಾಥನನ್ನು ಆರ್ತಳಾಗಿ ಪ್ರಾರ್ದಿಸ ತೊಡಗಿದ್ದಾಳೆ

ರಾಗ ಸಾವೇರಿ ತಾಳ ತೀನ್‌ತಾಲ

ಮಳೆಯ ದಯ ಮಾಡೋ ಶ್ರೀರಂಗ ನಿಮ್ಮ ।
ಕರುಣ ತಪ್ಪಿದರೆ ಉಳಿಯದೀ ಲೋಕಾ ॥ ಪಲ್ಲವಿ ॥

ಪಳುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ ।
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು ।
ತೃಷೆಯಡಗದೆ ತಲ್ಲಣಿಸಿ ಮೂರ್ಛೆಯಗೊಂಡು ।
ದೆಶೆದೆಶೆಗೆ ಬಾಯಿ ಬಿಡು ತಿಹವಯ್ಯ ಹರಿಯೆ ॥ ೧ ॥

ದಗೆಯಾಗಿ ಇನ್ನೂ ದ್ರವಗುಂದದ ಭಾವಿಯ ನೀರು ।
ಮಗಿ ಮಗಿದು ಪಾತ್ರೆಯಲಿ ನಾರಿಯರು
ಹಗಲೆಲ್ಲ ತರುತಿಹರು ಯೋಚನೆಯ ಮಾಡುತ
ಬೇಗದಿಂದಲಿ ತರಿಸೋ ವೃಷ್ಟಿಯನು ಹರಿಯೆ ॥ ೨ ॥

ಸಂದು ಹೋದವು ಜೇಷ್ಠ ಆಶಾಢ ಶ್ರಾವಣ ।
ಬಂದಿದೆ ಭಾದ್ರಪದ ಮಾಸವೀಗ ॥
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೋ ।
ಸಂದೇಹವಿನ್ನಾಕೆ ಹೆಳವನ ಕಟ್ಟೆ ರಂಗಾ ॥ ೩ ॥

ಗಿರಿಯಮ್ಮನ ಪ್ರಾರ್ಥನೆ ನಿರಂತರವಾಗಿ ಸಾಗಿದೆ ಅಂದು ಸಂಜೆ ಕಳೆಯುವುದರೊಳಗಾಗಿ ನಿರ್ಮಲವಾದ ಆಕಾಶದಲ್ಲಿ ಕಾರ್ಮೋಡಗಳು ಕಾಣಿಸಿಕೊಂಡು ಗುಡುಗು ಮಿಂಚಿನಿಂದ ಕೂಡಿದ ಜಡಿಮಳೆಯು ಪ್ರಾರಂಭವಾಗಿದೆ ಬತ್ತಿದ ನದಿಗಳು ಕೆರೆ ಬಾವಿಗಳು ತುಂಬಿ ಎಲ್ಲೆಲ್ಲಿಯೂ ಸಂತಸದ ಸುಗ್ಗಿ ಹರಿದಿದೆ ಊರಿನ

ಜನರೆಲ್ಲಾ ಆನಂದಿತರಾಗಿ ಜಯಕಾರ ಮಾಡುತ್ತಿದ್ದಾರೆ ಗಿರಿಯಮ್ಮನ ಮಹಾಮಹಿಮೆಯನ್ನು ಪ್ರತಿಯೊಬ್ಬರೂ ಬಾಯಿತುಂಬಾ ಹೊಗಳಿ ಹಾಡಿದ್ದಾರೆ

* * * *

ತಿಪ್ಪರಸನು ಪಟ್ಟದ ಶ್ಯಾನುಬೋಗನಾಗಿದ್ದರೂ ಕೆಲಸವನ್ನು ಅವರ ತಮ್ಮ ವೆಂಕಟ ನಿರ್ವಹಿಸುತ್ತಿದ್ದಾನೆ ತಿಪ್ಪರಸನ ಸಾತ್ವಿಕ ಗುಣಕ್ಕೆ ಕುಲಕರಣಿಕೆ ಒಪ್ಪುತ್ತಿರಲಿಲ್ಲ ಕಂದಾಯವು ದ್ರವ್ಯರೂಪವಾಗಿರದೆ, ರೈತರನ್ನು ಹಿಡಿದು ಭೂಮಿಯನ್ನು ಹಂಚಿ ವ್ಯವಸಾಯ ಮಾಡಿಸಿ, ರೇಖೆಯ ಕಾಲದಲ್ಲಿ ಧಾನ್ಯ ಅಳೆಸಿ ರಾಜ್ಯಾದಾಯವನ್ನು ಪ್ರತ್ಯೇಕವಾಗಿಡುವುದಲ್ಲದೆ ಅದನ್ನು ವರ್ತಕರಿಗೆ ಮಾರಿ ಹಣವನ್ನು ವಸೂಲಿ ಮಾಡಬೇಕಾಗುತ್ತಿತ್ತು ಅಮಿಲನು ವರಾತ ಮಾಡಿದಾಗ ಹಣವನ್ನು ಕಟ್ಟಬೇಕು ಅಮಿಲನ ಅನುಗ್ರಹಗಳಿಸದ ಕುಲಕರಣಿಗೆ ರಾಜದಂಡನೆಯಾಗುತ್ತಿತ್ತು

ಒಂದು ಬಾರಿ ವೆಂಕಟರಾಯನ ಮೇಲೆ ಅಮಿಲನು ಮೇಲಿನ ಅಧಿಕಾರಿಗಳಿಗೆ ದೂರಿತ್ತನು ವೆಂಕಟರಾಯನಿಗೆ ನಿಗಡಬಂಧನವಾಯಿತು ವೆಂಕಟರಾಯು ಗಿರಿಯಮ್ಮ ಮಾಡುವ ಸಮಾರಾಧನೆಗೆ ಬಟಾಯಿ ಧಾನ್ಯವನ್ನು ಉಪಯೋಗಿಸಿ, ರಾಜದ್ರೋಹ ಮಾಡಿದ್ದಾನೆ ಎಂಬುದೇ ವೆಂಕಟರಾಯನ ಮೇಲಿನ ಆರೋಪ ಸಕಾಲಕ್ಕೆ ಹಣ ಒದಗದಿರಲು, ವೆಂಕಟರಾಯನು ಕಂದಾಯ ಕಟ್ಟಲು ತಡವಾಗಿತ್ತು ರೈತರು ತಮ್ಮ ಕರಣೀಕನಿಗೆ ರಾಜದಂಡವಾಗುವುದನ್ನು ಸಹಿಸದೆ ಫೌಜುದಾರನ ಮನೆಯ ಬಾಗಿಲು ಕಾದು, ತಾವೇ ವೆಂಕಟರಾಯನು ಕಟ್ಟುವ ಹಣವನ್ನು ಕಟ್ಟುವುದಾಗಿ ನುಡಿದರು ಫೌಜುದಾರನೂ ವೆಂಕಟರಾಯನಂಥಹವನಿಗೆ ಅಪಮಾನ ಮಾಡಬೇಕಾಗಿರಲಿಲ್ಲವೆಂದು ಪಶ್ಚಾತ್ತಾಪಪಟ್ಟು, ಗಿರಿಯಮ್ಮನ ಕಥೆಯನ್ನು ಕೇಳಿದವನು ಅವಳನ್ನು ದರುಶನ ಮಾಡುವುದಕ್ಕಾಗಿ ಹೊರಟನು ಅಮಿಲನಿಗೆ ಫೌಜುದಾರ ಬರುವ ವಿಷಯ ಕೇಳಿ ಭಯವಾಗಿ ಅವನು ವೆಂಕಟರಾಯನ ನಿಗಡಬಂಧನವನ್ನು ಬಿಡಿಸಿ ಫೌಜುದಾರನನ್ನು ಎದುರುಗೊಳ್ಳಲು ವೈಭವದ ಔತಣವನ್ನೇರ್ಪಡಿಸಿದನು ಅಧಿಕಾರಿಯು ತಾನು ಗಿರಿಯಮ್ಮನನ್ನು ನೋಡಲು ಬಂದಿರುವುದಾಗಿ ಹೇಳಿ, ಕರೆದಾಗ ಅಮಿಲನು ಬರಬಹುದೆಂದು ಉತ್ತರಿಸಿದಾಗ ಅಮಿಲನಿಗೆ ಭಯವೇ ಆಯಿತು

ಫೌಜುದಾರನು ಗಿರಿಯಮ್ಮನ ದರುಶನ ಪಡೆದು ಜನರಿಗೆ ಅವಳಲ್ಲಿರುವ ಭಕ್ತಿಭಾವಗಳನ್ನು ನೋಡಿ ಮೆಚ್ಚಿಕೊಂಡನು ಗಿರಿಯಮ್ಮನಿಗೆ ಏನು ಸೇವೆ ಮಾಡಲೆಂದು ತಾನೇ ಕೇಳಿದಾಗ ಅವಳು "ದೇವರಲ್ಲಿ ಭಕ್ತಿಯಿಡಿರಿ ಚಿರಕಾಲ ಭಗವದ್ಭಕ್ತಿಗೆ ಅವಕಾಶ ಮಾಡಿಕೊಡಿ'' ಎಂದು ಹೇಳಿದಳು ಅಧಿಕಾರಿಯ ಸ್ಥಿತಿಯೇ ಬದಲಾದಂತಿದೆ

"ತಾವಂತೂ ಏನೂ ಅಪೇಕ್ಷಿಸುವುದಿಲ್ಲ ಆದರೆ ವೆಂಕಟರಾಯನಿಗೆ ಏನಾದರೂ ಸಹಾಯ ಮಾಡಲೇ'' ಎಂದು ಅಧಿಕಾರಿಯೇ ಪ್ರಶ್ನಿಸಿದ

"ವೆಂಕಟರಾಯನಿಗೆ ಲೌಕಿಕ ಬಿಡಿರೆಂದು ಹೇಳಿದೆ ಆದರೆ ಲೌಕಿಕ ಅವನನ್ನು ಬಿಡುತ್ತಿಲ್ಲ'' ಗಿರಿಯಮ್ಮ ನಕ್ಕಾಗ ವೆಂಕಟರಾಯನಿಗೆ ತಲೆ ಬಾಗುವಂತಾಯ್ತು

"ಇಂದು ನಿಮ್ಮ ಮನೆಯ ಔತಣಕ್ಕಾಗಿ ಬಂದಿದ್ದೇನೆ'' ಫೌಜುದಾರನೆಂದ

"ಆಯಿತು ಈವತ್ತು ನಮ್ಮ ಮನೆಯಲ್ಲಿ ನುಚ್ಚಿನ ಭಕ್ಕರಿ ತೊಕ್ಕು ಇಷ್ಟೇ ಮಾಡಿದ್ದೇನೆ ಅದನ್ನು ಸ್ವೀಕರಿಸಿ''

ಗಿರಿಯಮ್ಮನು ಔತಣವನ್ನು ಸ್ವೀಕರಿಸಿ ಆನಂದಿತನಾಗಿ ಫೌಜುದಾರನು ವೆಂಕಟರಾಯನಿಗೆ ವಂಶಪಾರಂಪರ್ಯವಾಗಿ ಪ್ರತಿಗ್ರಾಮದಲ್ಲಿ ಭೂಮಿ, ಮನೆ ಕಣನಾಡಿಗತನ ಮತ್ತು ದೇಶಪಾಂಡೇಗಿರಿ ಇಷ್ಟನ್ನೂ ಮಾಡಿಕೊಟ್ಟನು

ಹೀಗೆ ಗಿರಿಯಮ್ಮ ತನ್ನ ಭಕ್ತಿಯ ಬಲದಿಂದ ಜನಕೋಟಿಯ ಮೆಚ್ಚುಗೆ ಗಳಿಸಿದ್ದಾಳೆ ದಾಸ ಚತುಷ್ಟಯರ ಪಂಕ್ತಿಗೆ ಸೇರಿದ ಗಿರಿಯಮ್ಮ ನೂರಾರು ದೇವರ ನಾಮಗಳನ್ನು, ಇತರ ವಿಶೇಷ ಏಳು ಕೃತಿಗಳನ್ನು ತನ್ನ ಕಾಲದಲ್ಲಿ ರಚಿಸಿದ್ದಾಳೆ ಗಿರಿಯಮ್ಮನ ಕೀರ್ತನೆಗಳ ಸಾಹಿತ್ಯಿಕ ಗುಣ ಮಾತ್ರ ವಿಶೇಷ ತೆರನಾದುದು ತಾಯಿಗೆ ಮಗನ ಮೇಲಿರುವಂತಹ ವಾತ್ಸಲ್ಯ, ಅಕ್ಕರೆ, ಅನುಕಂಪಗಳು ಅವಳ ಕೀರ್ತನೆಯ ಉದ್ದಕ್ಕೂ ಸ್ಥಾಯಿಯಾಗಿ ಹರಿದುಬಂದಿವೆ ಆಗಾಗ್ಗೆ ಗಿರಿಯಮ್ಮ ತನ್ನ ಭಕ್ತವೃಂದದೊಡನೆ ಪುಣ್ಯಕ್ಷೇತ್ರಗಳಿಗೆ ಹೋಗಿ ಬರುತ್ತಿದ್ದಳು ಅಂತ್ಯದಲ್ಲಿ ಅವಳು ತನ್ನ ಭಕ್ತರೊಡನೆ, ಮಂತ್ರಾಲಯ, ಪಂಡರಾಪುರ, ತಿರುಪತಿ, ಉಡುಪಿ ಇತ್ಯಾದಿ ಪುಣ್ಯ ಕ್ಷೇತ್ರಗಳಿಗೆ ಹೋಗಿ ಬಂದಿದ್ದಾಳೆ ಅನಂತರ ತನ್ನ ಇಹಲೋಕದ ಧಾರ್ಮಿಕ

ಸಾದನೆಗೆ ಇತಿಶ್ರೀ ಹಾಡಲು ನಿರ್ಧರಿಸಿ ತನ್ನ ಲೌಕಿಕ ಸಂಬಂಧವಾದ ಜಡಶರೀರವನ್ನು ತ್ಯಜಿಸಿ ಶಾಶ್ವತವಾದ ಪರಮಾತ್ಮನ ಸಾನ್ನಿಧ್ಯವನ್ನು ಸೇರಲು ತೀರ್ಮಾನಿಸಿದ್ದಾಳೆ ಮುತ್ತೈದೆಯರು ಗಿರಿಯಮ್ಮನಿಗೆ ಉಡಿ ತುಂಬಿ ಮರದ ಬಾಗಿನಗಳನ್ನು ನೀಡಿ ಪೂಜಿಸಿ ಬೀಳ್ಕೊಟ್ಟಿದ್ದಾರೆ

ಶ್ರಾವಣ ಶುದ್ಧ ಪಂಚಮಿಯ ದಿನ ಗಿರಿಯಮ್ಮ ಹೊಸ್ನಾಳಿಗೆ ಸಮೀಪದಲ್ಲಿನ ತುಂಗಭದ್ರಾ ತೀರದಲ್ಲಿರುವ ಕಮ್ಮಾರಗಟ್ಟೆ ಎಂಬ ಗ್ರಾಮಕ್ಕೆ ಬಂದು ಸೇರಿದ್ದಾಳೆ ಆ ಸ್ಥಳದಲ್ಲಿ ನದಿಗೆ ಸೋಪಾನವನ್ನೂ ಮಾರುತಿಗೆ ದೇವಸ್ಥಾನವನ್ನೂ ಗಿರಿಯಮ್ಮನು ಕಟ್ಟಿಸಿದಳೆಂದು ವದಂತಿ ತುಂಗಭದ್ರಾ ನದಿಯ ದಂಡೆಗೆ ಬಂದು ನಿಂತು, ಹಾಡತೊಡಗಿದ್ದಾಳೆ

ರಾಗ ಸೋಹನಿ ತಾಳ ದಾದರಾ

ಈತ ಅಂಜನೆಸುತನು ಭೀಮರಾಯನು ॥ ಪಲ್ಲವಿ ॥

ಈತ ರಾಮರ ಬಂಟನು ।
ಈತ ಕೋಟಿ ಲಿಂಗವನ್ನು ರೋಮರೋಮಕ್ಕೆ ದರಿಸಿ ।
ಈತ ಲೋಕಪ್ರಖ್ಯಾತನು ಭೀಮರಾಯನು ॥ ಅ ಪ ॥

ಪುಟ್ಟಿದಾಗಲೇ ಗಗನ ಮಂಡಲವನ್ನು ಮುಟ್ಟಿ ರವಿಯನು ತುಡುಃ ।
ಇಟ್ಟ ಕೈಪ ಕುಂಡಲವನ್ನು ತೊಟ್ಟು ಮೆರೆವಂಥ ದಿಟ್ಟ ಹನುಮರಾಯನು ॥ ೧ ॥

ಮುಂಚೆ ಕಂಡವನ ಸ್ವಾಮಿಯ ಅಂದು ಸೇವೆಯ ವಂಚನಿಲ್ಲದೆ ಮಾಡಿದಿ ।
ಅಂಚೆಗಮನೆ ಸೀತಾದೇವಿ ಗುಂಗುರ ವಿತ್ತ ಮಿಂಚುಳ್ಳವನವ
ಕಿತ್ತನು ಭೀಮರಾಯನು ॥ ೨ ॥

ತಂತ್ರವರಸ ಶೂರನು ಸಂಗ್ರಾಮದಿ ಮಾರಾಂತ ವೀರರಾಗೆಲಿದೆ।
ಪಂಥದಿ ಸಂಜೀವನವ ತಂದು ಲಕ್ಷ್ಮಣಗಿತ್ತೆ ಅಂತಕನೈದಾ
ಶೂಲವು ಭೀಮರಾಯನು ॥ ೩ ॥

ಲಂಕೆಗೆಯನೆ ತುಡುಃ ಮಾಯಾಜಾಲವ ಶಂಕೆಯಿಲ್ಲದೆ ಗೆಲಿದೆ।
ಲಂಕಾ ಪಟ್ಟಣವ ಸುಟ್ಟು ರಾವಣೇಶ್ವರನ ಅಹಂಕಾರವಳಿದ
ದೀರಾ ಭೀಮರಾಯನು ॥ ೪ ॥

ಲೆಕ್ಕವಿಲ್ಲದ ಖಳರ ಗೆಲಿದು ಬಂದು ಕೊಕ್ಕನೂರೊಳು ನಿಂತಾನು ।
ರಕ್ಕ ಸಾಂತಕ ಹೆಳವನ ಕಟ್ಟಿ ರಂಗಯ್ಯನ ಅಕ್ಕರುಳ್ಳತಿದಾಸನು।
ಭೀಮರಾಯನು ॥ ೫ ॥

ಹೀಗೆಂದು ಹಾಡುತ್ತಾ ಗಿರಿಯಮ್ಮ ತುಂಗೆಯ ಪ್ರವಾಹಕ್ಕಿಳಿದಿದ್ದಾಳೆ ಅಂತ್ಯದಲ್ಲಿ ಗಿರಿಯಮ್ಮನಿಗೆ ಮಾರುತಿಯ ದರುಶನವಾಗಿ ತುಂಗೆಯ ಪೂರ್ಣ ಪ್ರವಾಹದಲ್ಲಿ ದೇಹತ್ಯಾಗ ಮಾಡಿ ಅವಳು ದೇವರ ಸಾನಿಧ್ಯ ಸಾನಿದ್ಯ ಪಡೆದಿದ್ದಾಳೆ

## ಗಿರಿಯಮ್ಮನ ಇತರ ಏಳು ಕೃತಿಗಳ ಸಮೀಕ್ಷೆ

ಗಿರಿಯಮ್ಮ ಅನೇಕ ದೇವರ ನಾಮಗಳನ್ನಲ್ಲದೆ ಏಳು ವಿಶೇಷ ಕೃತಿಗಳನ್ನೂ ರಚಿಸಿದುದು ಕನ್ನಡ ಸಾಹಿತ್ಯದಲ್ಲಿ ಅವಳಿಗೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ

ಪರಮಾತ್ಮನ ವಿವಿದ ಅವತಾರಗಳನ್ನೂ, ಅವನ ಬಾಲ್ಯ ಕಾಲದ ಆಟ ಪಾಟಗಳನ್ನೂ, ಅವನ ಕಾರುಣ್ಯದ ಮಹತ್ತರ ಪರಿಣಾಮವನ್ನೂ ಹಾಡಿ ಹೊಗಳಲು ಗಿರಿಯಮ್ಮ ತನ್ನ ಕೃತಿಗಳಲ್ಲಿ ಅವಕಾಶ ಮಾಡಿಕೊಂಡಿದ್ದಾಳೆ

''ಕೃಷ್ಣ ಕೊರವಂಜಿ''ಯು ಗಿರಿಯಮ್ಮನಿಂದ ರಚಿತವಾದ ಪ್ರಥಮ ಕೃತಿ ಇರಬಹುದು ಎಂದು ವಿದ್ವಾಂಸರು ಊಹಿಸಿದ್ದಾರೆ ಶ್ರೀಕೃಷ್ಣನು ಕೊರವಂಜಿಯ ವೇಷ ಧರಿಸಿ ರುಕ್ಮಿಣಿಗೆ ಧೈರ್ಯ ಹೇಳುವ ಪ್ರಸಂಗ ಇಲ್ಲಿ ಬಂದಿದೆ

''ಶುಕ್ಲಾಂಬರವನುಟ್ಟ ಚಕ್ರಧರಗೆ ನಮಿಸಿ ವಕ್ರಬುದ್ಧಿಯ ತಿದ್ದಿಕೊಂಬೆ ನಾನು '' ಎಂದು ಆರಂಬಿಸಿದ ಗಿರಿಯಮ್ಮ ಮುಂದುವರಿದು, ಕೃಷ್ಣನ ಕೊರವಂಜಿಯ ರೂಪ ವರ್ಣಿಸುತ್ತಾಳೆ

ಕೊರವಿ ಹಬ್ಬಿನ ಕೂಟ । ಧರೆಗೆ ಚಾಪದ ನೋಟ ।
ಗುಲಗಂಜಿಸರಗಳು ಎದೆಯಲಿ ಅಲೆಯುತ
ಮಲಗಂಟು ಬಿಗಿದಾಳ ಮಲುಹಾಃ
ಹೆಬ್ಬಾಗಿಲದೊಳ್ ಹುಬ್ಬುಗಳ
ಕುಗೆಸುತ ಅಬ್ಬರದಿಂದ ಸ್ವರಗೈದಾಳು ।

ರುಕ್ಮಿಣಿಯ ಅಣ್ಣನಾದ, ರುಕ್ಮಿ ತನ್ನ ತಂಗಿಯನ್ನು ಜರಾಸಂಧನಿಗೆ ಕೊಡಲು ನಿಶ್ಚಯಿಸಿರುತ್ತಾನೆ ಆದರೆ ರುಕ್ಮಿಣಿಯ ಮನಸ್ಸೆಲ್ಲಾ ಕೃಷ್ಣನ ಮೇಲೆಯೇ

ಕೃಷ್ಣನಿಗೂ ಅಷ್ಟೇ ಆದುದರಿಂದ ತಮ್ಮೀರ್ವರ ವಿವಾಹ ನಡೆಯುವಂತೆ, ಕೃಷ್ಣನೇ ಹಸ್ತಕ್ಷೇಪ ಮಾಡುತ್ತಾ ಕೊರೂವಂಜಿಯ ರೂಪ ತಳೆದು ರುಕ್ಮಿಣಿಯ ಬಳಿಗೆ ಬಂದು ಅವಳಿಗೆ ಧೈರ್ಯ ತುಂಬುತ್ತಾನೆ ಕೊರವಂಜಿಯ ರೂಪ ಧರಿಸಿದ ಕೃಷ್ಣನ ವರ್ಣನೆಯನ್ನು ಸ್ವಾರಸ್ಯವಾಗಿ ಚಿತ್ರಿಸಿದ ಗಿರಿಯಮ್ಮ ಕನ್ನಡ ಬಕ್ತಿ ಸಾಹಿತ್ಯದಲ್ಲಿ ಹೊಸ ಆಯಾಮವನ್ನೇ ಸೃಷ್ಟಿಸಿದ್ದಾಳೆ

ಗಿರಿಯಮ್ಮನ ಮತ್ತೊಂದು ಕೃತಿ "ಬ್ರಹ್ಮ ಕೊರವಂಜಿ"

ಕಂಸನು ತನ್ನ ತಂಗಿಯಾದ ದೇವಕೀದೇವಿಯನ್ನು ವಸುದೇವನಿಗಿತ್ತು ಮದುವೆ ಮಾಡುತ್ತಾನೆ ಆದರೆ ವಿವಾಹದ ಸಮಯದಲ್ಲೇ ಆಕಾಶವಾಣಿಯಾಗಿ, ದೇವಕಿಯ ಗರ್ಬದಿಂದ ಜನಿಸುವ ಮಗುವೇ ಕಂಸನಿಗೆ ಮೃತ್ಯುವಾಗಿ ಪರಿಣಮಿಸುತ್ತದೆ ಎಂದು ತಿಳಿದು ಬಂದಾಗ ಕಂಸನು ತನ್ನ ತಂಗಿಯನ್ನೂ ವಸುದೇವನನ್ನೂ ಸೆರೆಮನೆಯಲ್ಲಿಡುತ್ತಾನೆ ಆಗ ದೇವಕಿಗೆ ಕಷ್ಟದ ದಿನಗಳು ಆರಂಬವಾಗಿ ಆವಳು ಪರಿತಪಿಸುವಾಗ, ಬ್ರಹ್ಮನೇ ಸ್ವತಃ ಕೊರವಿಯ ರೂಪ ದರಿಸಿ ದೇವಕಿಗೆ ಅಭಯ ನೀಡುತ್ತಾ ಮುಂದೆ ಅವಳ ಗರ್ಭದಿಂದ ಜನಿಸಿ ಬರುವವನು ಪರಮಾತ್ಮನೆಂದೂ ಆನಂತರ ವಸುದೇವ ದೇವಕಿಯರ ಕಷ್ಟನಿವಾರಣೆಯಾಗುವುದೆಂದೂ ತಿಳಿಸುತ್ತಾನೆ

ಊರ್ವಿಯೊಳಗೆ ದಿಟ್ಟನಮ್ಮಾ ಅಮ್ಮಯ್ಯ ನಿಮ್ಮ  
ಗರ್ಭದೊಳಿಹನು ಕಾಣಮ್ಮ ।  
ಕಂಟಕ ಕಂಸನ ಅಮ್ಮಾ ಇವ ಪುಟ್ಟು ಗಂಟಲ  
ಮುರಿವ ಕಾಣಮ್ಮಾ ।

ಗಿರಿಯಮ್ಮನ ಈ ಕಾವ್ಯದ ಪದಸಂಯೋಜನೆ, ಪ್ರಾಸಗಳ ನಿಯತವಾದ ಪರಿಪಾಲನೆಯ ಕಾವ್ಯದ ವೈಶಿಷ್ಟ್ಯವನ್ನು ಸೂಚಿಸುತ್ತದೆ

"ಉದ್ದಾಳಿಕನ ಕತೆ" ಯಲ್ಲಿ ಉದ್ದಾಳಿಕನು ಬಾಲ್ಯ ಕಾಲದಿಂದಲೇ ವಿರಾಗಿಯಾಗಿ ವೈರಾಗ್ಯವನ್ನು ಸಾಧಿಸಲು ತಪಸ್ಸು ಮಾಡುತ್ತಿರುವಾಗ ಅವನ ಪಿತೃಗಳು ಅವನ ಸಂತತಿ ಇಲ್ಲದುದಕ್ಕಾಗಿ ಯಮಲೋಕದಲ್ಲಿ ಪರಿತಪಿಸುತ್ತಿರುತ್ತಾರೆ ಪಿತೃಗಳ ಉದ್ಧಾರಕ್ಕಾಗಿ ಉದ್ದಾಳಿಕನು ಬ್ರಹ್ಮನ ಸಲಹೆ ಕೇಳಿದಾಗ ಬ್ರಹ್ಮನು ಅಯೋಧ್ಯೆಯಲ್ಲಿ ಆಳುತ್ತಿರುವ ರಘುಮಹಾರಾಜನ ಪುತ್ರಿ ಚಂದ್ರವತಿಯನ್ನು ವಿವಾಹವಾಗಲು ಸೂಚಿಸುತ್ತಾನೆ ಈ ಪದ್ಯದಲ್ಲಿ –

ಉತ್ತಮ ಋಷಿಕುಲ ರಘುದಾಯಿನಾತ್ಮಜೆ
ಮತ್ತಕಾಸಿನಿ ಇಪ್ಪಳು ಕನ್ನಿಕೆಯಾಗಿ ।
ಪುತ್ರ ಹುಟ್ಟಿದ ಏಳು ವರ್ಷಕೆ ಪತ್ನಿಯು
ದೃಷ್ಟಿ ಗೋಚರಕೆ ಬೀಳುವಳು ॥

ಒಂದು ದಿನ ಚಂದ್ರವತಿ ತನ್ನ ಕೆಳದಿಯರೊಡನೆ ನೀರಾಟವಾಡಲು ಒಂದು ಏಳು ಗಾವುದ ದೂರದ ಮೇಲಿಂದ ಉದ್ದಾಳಿಕನು ತೇಲುಬಿಟ್ಟ ಕಮಲವನ್ನು ಆಘ್ರಾಣಿಸಿ ಗರ್ಭಧರಿಸುತ್ತಾಳೆ ಮಾನಕ್ಕಂಜಿ ತಂದೆ ತಾಯಿಗಳು ಅವಳನ್ನು ಕಾಡುಪಾಲು ಮಾಡುತ್ತಾರೆ ಮುನಿಯೊಬ್ಬನ ಪೋಷಣೆಯಲ್ಲಿ ಅವಳು ಕಾಡಿನಲ್ಲೇ ಪ್ರಸವಿಸುತ್ತಾಳೆ ಅನಾಹುತಕ್ಕೆ ಕಾರಣವಾದ ಮಗುವನ್ನು ಅವಳು ನೀರಿನಲ್ಲಿ ತೇಲಿಬಿಡುತ್ತಾಳೆ ವಿಧಿಯ ಕೈವಾಡದಿಂದಾಗಿಯೇ ಪತ್ನಿ ಮಗನಿಂದ ದೂರವಾಗಿದ್ದ ಉದ್ದಾಳಿಕ, ಅದೇ ವಿಧಿಯ ಕೃಪೆಯಿಂದ ಏಳು ವರ್ಷಗಳ ನಂತರ ಪತ್ನಿ ಪುತ್ರರನ್ನು ಸೇರುತ್ತಾನೆ ವಿಧಿ ಮನುಷ್ಯನನ್ನು ಲೀಲಾಜಾಲವಾಗಿ ಹೇಗೆ ಆಡಿಸುತ್ತದೆ ಎಂಬುದಕ್ಕೆ ಉದ್ದಾಳಿಕನ ಕತೆ ಸಾಕ್ಷಿಯಾಗಿದೆ

ಲವ–ಕುಶರ ಕಾಳಗದಲ್ಲಿ ಗರ್ಭಿಣಿಯಾದ ಸೀತಾದೇವಿಯನ್ನು ರಾಮ ಲೋಕೋಪವಾದದ ಭಯದಿಂದ ವಾಲ್ಮೀಕಿ ಆಶ್ರಮದಲ್ಲಿ ಬಿಟ್ಟಿದ್ದಾನೆ ಅಲ್ಲಿ ಸೀತಾದೇವಿ ಲವ–ಕುಶರಿಗೆ ಜನ್ಮ ವಿತ್ತಿದ್ದಾಳೆ ರಾಮನ ಯಾಗದ ಕುದುರೆ ವಾಲ್ಮೀಕಿ ಆಶ್ರಮ ಹೊಕ್ಕಾಗ ಲವಕುಶರು ಅದನ್ನು ಕಟ್ಟಿ ಹಾಕುತ್ತಾರೆ ಆಗ, ಶತ್ರುಘ್ನನಿಗೂ ಲವಕುಶರಿಗೂ ನಡೆದ ಸಂಭಾಷಣೆಯನ್ನು ಗಿರಿಯಮ್ಮ ತನ್ನ ಕಾವ್ಯದಲ್ಲಿ ಹೆಚ್ಚು ರಸವತ್ತಾಗಿ ವಿವರಿಸಿದ್ದಾಳೆ

ಬಾಲರೇ ನಿಮಗಿಲ್ಲ ತಂದೆ ತಾಯಿಗಳ್ಯಾರು ।
ಆಳುವ ಒಡೆಯರಿನ್ಯಾರು ।

ತಾಯಿ ತಂದೆ ನಮ್ಮ ಆಳುವ ಒಡೆಯರ
ಈಗಲೆ ಕೇಳಲೇನಹುದು ।

ಕಾಳಗ ಗೆದ್ದು ನಾ ಕಡೆಗುಳಿದು ನಿಂತರ
ತಾಯಿ–ತಂದೆಗೆ ಹೆಸರು ಕೀರ್ತಿ ।

ಕಾಳಗದ ಗೊಡವಿ ನೀವೇನು ಬಲ್ಲಿರೋ ತಮ್ಮ
ತಾಯಿ ಮಕ್ಕಳು ಸುಖದಲ್ಲಿ ।

ತೇಜಿ ಹಿಡಿದು ನಮ್ಮ ರಾಯರ ಮನಿಯೊಳಗೆ
ಊಳಿಗ ಮಾಡಿದಿರೆಂದಾ ।

ತಾಯಿ ಆಳಿದ ರಾಜ್ಯವಲ್ಲದೆ ಅದು ಮಾತ್ರ
ಊಳಿಗವೆನಿಸೋದು ನಮಗೆ ।

ಗೌಡಿ ಮಾತನ ಕೇಳಿ ಮಲತಾಯಿ ಮಕ್ಕಳನೆ
ಕಳುಹಿದಿರಿ ಕಾನನಕೆ ।

ಉತ್ತಮರು ರಾಮ ಲಕ್ಷ್ಮಣರಾದ ಕಾರಣ ಮತ್ತೆ
ಕೈ ಹಿಡಿದರು ನಿಮ್ಮ ।

ಅನಂತರ ತಂದೆ ಮಕ್ಕಳಿಗೆ ನಡೆದ ಯುದ್ಧ, ಸೂರ್ಯನ ವರದಿಂದ ಸುಖಾಂತವೇ ಆಗಿ ಸೀತಾ, ರಾಮ, ಲವ–ಕುಶರ ಸಮಾಗಮವಾಗುತ್ತದೆ

## ಸೀತಾ–ಕಲ್ಯಾಣ

ಕೇವಲ ಎಂಬತ್ತೇಳು ಪದ್ಯಗಳನ್ನು ಮಾತ್ರ ಹೊಂದಿರುವ ಈ ಕೃತಿಯು ಹೆಸರೇ ಸೂಚಿಸುವಂತೆ – ರಾಮ–ಸೀತೆಯರ ಕಲ್ಯಾಣಮಹೋತ್ಸವದ ವರ್ಣನೆಯನ್ನು ಕುರಿತದ್ದು

ಜನಕರಾಜ ತನ್ನ ಮಗಳಾದ ಜಾನಕಿಯನ್ನು ಅಯೋಧ್ಯಾಪುರದರಸು ದಶರಥರಾಜನ ಮಗನಾದ ಶ್ರೀರಾಮನಿಗೆ ದಾರೆಯೆರೆದು ಕೊಡಬೇಕೆಂದು ನಿಶ್ಚಯಿಸುತ್ತಾನೆ ಸೀತಾಕಲ್ಯಾಣದ ಈ ಸಂದರ್ಭದಲ್ಲಿ ಜನಕರಾಜನ ಅರಮನೆಗೆ ರಾಮ ಮೊದಲಾದವರು ಎಣ್ಣೆ ಅರಿಷಿಣಕ್ಕಾಗಿ ಹೋಗುತ್ತಾರೆ ಆಗ ವಿವಾಹದ ಜೊತೆಯಲ್ಲಿ ನಡೆಯುವ ಉರುಟಣೆ, ಹಸೆಗೆ ಕರೆಯುವುದೇ ಮೊದಲಾದವುಗಳ ದೀರ್ಘವರ್ಣನೆಯನ್ನು ಇಲ್ಲಿ ಮಾಡಲಾಗಿದೆ ಜೊತೆಯಲ್ಲಿ ಸಂದರ್ಭಕ್ಕೆ ತಕ್ಕಂತೆ ರಾಮನ ಹತ್ತು ಅವತಾರಗಳನ್ನೂ ವರ್ಣಿಸಲಾಗಿದೆ ಈ ಕೃತಿಯ ಉದ್ದಕ್ಕೂ ಕವಯಿತ್ರಿಯ ಭಕ್ತಿ, ವಿನಮ್ರತೆ ತುಂಬಿ ಸೂಸುತ್ತದೆ

## ಶಂಕರಗಂಡನ ಹಾಡು

ಆನುಷಂಗಿಕವಾಗಿ ಕಾಮನಿಗೆ ಬಂದ ಗರ್ವವನ್ನು ಶಂಕರನು ಭಂಗಪಡಿಸಿದ ಕಥೆಯನ್ನು ಶಂಕರಗಂಡನ ಹಾಡಿನಲ್ಲಿ ಹೆಣೆಯಲಾಗಿದೆ

ಶಿವನು ತನ್ನ ತಂಗಿಯಾದ ರತಿದೇವಿಗೆ ಕಾಮನೇ ತಕ್ಕ ವರನೆಂದು ನಿಶ್ಚಯಿಸಿ ದೂತರನ್ನಟ್ಟಿ ಕಾಮನನ್ನು ಕರೆಸುತ್ತಾನೆ ರತಿಯ ಅಪರೂಪವಾದ ಚೆಲ್ವಿಕೆಗೆ ಮೆಚ್ಚಿ ಕಾಮನೂ ಅವಳನ್ನು ಒಪ್ಪುತ್ತಾನೆ ಮೇಲಿಂದಮೇಲೆ ತನ್ನ ಮನೆಗೆ ತಂಗಿಯನ್ನು ಕಳಿಸುತ್ತಿರಬೇಕು ಎಂದು ಮನ್ಮಥನಿಂದ ಮಾತು ಪಡೆದು, ಶಿವನು ರತಿಯನ್ನು ಕಾಮನಿಗೆ ವಿವಾಹ ಮಾಡಿಕೊಡುತ್ತಾನೆ

ಒಮ್ಮೆ ತಂಗಿಯನ್ನು ನೋಡಬಂದು ಶಿವನನ್ನು ಕಂಡು ಮನ್ಮಥನು ಹಾಸ್ಯ ಮಾಡುತ್ತಾನೆ ರತಿಯನ್ನು ಕಳಿಸಿಕೊಡಬೇಕೆಂಬ ಅವಳಣ್ಣನ ಮಾತನ್ನೂ ಮನ್ನಿಸುವುದಿಲ್ಲ ನಮ್ಮ ಮನೆಯಲ್ಲಿ ಯಾವಾಗಲೂ ಪಂಚಭಕ್ಷ್ಯವನ್ನುಣ್ಣುವ ನನ್ನ ಭಾಮಿನಿ ನಿಮ್ಮ ಮನೆಯ ಜೋಳವನ್ನುಣ್ಣಲಾರಳು – ಎಂಬ ಮನ್ಮಥನ ಗರ್ವದ ಮಾತನ್ನು ಕೇಳಿ ಶಿವನು ಅವನಿಗೆ ದಾರಿದ್ರ್ಯ ಬರುವಂತೆ ಮಾಡುತ್ತಾನೆ ಸಕಲೈಶ್ವರ್ಯವನ್ನೂ ಕಳೆದುಕೊಂಡು ದರಿದ್ರನಾದ ಮನ್ಮಥನ ಕೈಲಿ ಶಿವನು ದನಗಳನ್ನೂ ಕಾಯಲು ಹಚ್ಚುತ್ತಾನೆ ಕೊನೆಗೆ ರತಿಯ ಬೇಡಿಕೆಯಂತೆ ಶಿವನ ಕೃಪೆಯಿಂದ ಮನ್ಮಥನ ಸಕಲ ಸಂಪತ್ತೂ ಮರಳಿ ಸಿಗುತ್ತದೆ ಕಾರಣ ಗರ್ವವೆಂಬುದು ಎಂದಿಗಾದರೂ ಒಳ್ಳೆಯದಲ್ಲ ಎಂಬ ಮಾತನ್ನು ಈ ಕಥೆ ಬಿಂಬಿಸುತ್ತದೆ

ಈ ಕಥೆಯನ್ನು ಶ್ರಾವಣಮಾಸದಲ್ಲಿ ಅಷ್ಟಮಿಯ ದಿನ, ಗೌರಿಯ ದಾರ ಕಟ್ಟಿಕೊಳ್ಳುವಾಗ ಹೇಳುವ ಸಂಪ್ರದಾಯ ಉತ್ತರ ಕರ್ನಾಟಕದ ಹೆಂಗಸರಲ್ಲಿದೆ

## ಚಂದ್ರಹಾಸನ ಕಥೆ

ಮಹಾಭಾರತದಲ್ಲಿ ಬರುವ ರೋಮಾಂಚಕಾರಿ ಕಥೆಗಳಲ್ಲೊಂದಾದುದು 'ಚಂದ್ರಹಾಸನ ಕಥೆ'

ಪಾಂಡವರ ಅಶ್ವಮೇಧಯಾಗದ ಕುದುರೆಯನ್ನು ಚಂದ್ರಹಾಸನ ಮಗ ಮಕರಧ್ವಜ ಕಟ್ಟಿ ಹಾಕಿದಾಗ ನಾರದನು ಫಲುಗುಣನಿಗೆ ಚಂದ್ರಹಾಸನ ಕಥೆ ಹೇಳುತ್ತಾನೆ

ಕೇರಳ ರಾಜ್ಯವನ್ನಾಳುವ ಪ್ರಭು ಧಾರ್ಮಿಕನು ಆತನ ಸತಿಯು ಮೂಲಾ ನಕ್ಷತ್ರದಲ್ಲಿ ಗಂಡುಮಗುವಿಗೆ ಜನನವಿತ್ತಳು ಜಾತಕರ್ಮ ನಾಮಕರಣ ಮಾಡದೆ ಅವನ ತಂದೆ ತೀರಿಹೋದಾಗ, ನಾಯಕರಿಲ್ಲದ ಕಾಯವಿದೇಕೆಂದು ರಾಜಪತ್ನಿಯೂ

ಸಹಗಮನ ಮಾಡಿದಳು ಅನಾಥನಾದ ಬಾಲಕನನ್ನು ಕಂಡು ಮನದಲ್ಲೇ ಮರುಗುತ್ತಾ ದಾಸಿಯೊಬ್ಬಳು ಅವನನ್ನು ಸಾಕುವಳು

ದೇಶಾಪತಿಯ ಬಸಿರಿನಲ್ಲಿ ಜನಿಸಿದ ನಿನಗೆ ಹಾಸುವ ವಸ್ತ್ರಗಳಿಲ್ಲ ತೂಗಲು ತೊಟ್ಟಿಲಿಲ್ಲವೆಂದು ಆ ದಾಸಿಯು ಬೇಸರಿಸುತ್ತಾ ಚಂದ್ರಹಾಸನನ್ನು ಸಾಕುವಳು ಅನಂತರ ಅವಳೂ ಮೃತಳಾದಾಗ ಅನಾಥನಾದ ಚಂದ್ರಹಾಸ ಕೇರಿಯ ನಾರಿಯರ ಆಶ್ರಯದಲ್ಲಿ ಬೆಳೆಯತೊಡುಗುತ್ತಾನೆ ಗಿರಿಯಮ್ಮ ಇಲ್ಲಿ ಸ್ತ್ರೀ ಸಹಜವಾದ ಅನುಕಂಪದಿಂದ ಬಹಳ ಸುಂದರವಾಗಿ ವರ್ಣಿಸಿದ್ದಾಳೆ

ಪೋಷಿಸುತಿರೆ ದಾಸಿ ಅಂತರಸಿಪೋದಳು ಬಾಲ
ಪರಪುಟ್ಟನಾದುದು ಕಂಡು,
ನೆರೆಯ ನಾರಿಯರೆಲ್ಲ ತಮ್ಮ ಮಕ್ಕಳ ಕೂಡೆ,
ಎರೆದು ಮಡಿಯ ಪೊದಿಸುವರು

ಚಂದ್ರಹಾಸ ಒಂದುಬಾರಿ ಕಾಡಿನಲ್ಲಿ ಏಕಾಂಗಿಯಾಗಿ ಅಲೆಯುವಾಗ ಅವನಿಗೊಂದು ಸಾಲಿಗ್ರಾಮ ಸಿಗುತ್ತದೆ ಆ ಸಾಲಿಗ್ರಾಮದ ಬಲದಿಂದ ದೇಶಾಧಿಪತಿಯಾಗುತ್ತಾನೆ ಆದರೆ ತಾನೇ ರಾಜನಾಗಬೇಕೆಂದು ಹಂಚಿಕೆ ಹಾಕಿದ್ದ ಮಂತ್ರಿ ದುಷ್ಟಬುದ್ಧಿ, ಅವನನ್ನು ಕೊಲ್ಲಿಸಲು ಪ್ರಯತ್ನ ಮಾಡಿದಾಗ ಅವನೇ ಚಂದ್ರಹಾಸನ ಮಾವನಾಗುವಂತಾಗುತ್ತದೆ ಎಲ್ಲವೂ ಭಗವತ್ಕೃಪೆಯಿಂದ ಎಂಬ ಪ್ರಜ್ಞೆ ಚಂದ್ರಹಾಸನಲ್ಲಿ ಸದಾ ಜಾಗೃತವಾಗಿರುತ್ತದೆ

ಈ ಕೃತಿಯಲ್ಲಿ ಗಿರಿಯಮ್ಮನ ಕವಿತ್ವ ತನ್ನ ಪರಕಾಷ್ಠತೆಯನ್ನು ಮುಟ್ಟಿದೆ ಲಕ್ಷ್ಮೀಶನನ್ನು ಅನುಸರಿಸಿ ತಾನು ಕತೆ ಹೇಳುವುದಾಗಿ ಕವಯಿತ್ರಿ ಸ್ಪಷ್ಟವಾಗಿ ಹೇಳಿರುವುದರಿಂದ ಅವಳ ಮೇಲೆ ಲಕ್ಷ್ಮೀಶನ ಪ್ರಭಾವ ಸಂಪೂರ್ಣವಾಗಿ ಬಿದ್ದುದು ಕಂಡುಬರುತ್ತವೆ ಎಂದು ಹೇಳಬಹುದು ಒಟ್ಟಿನಲ್ಲಿ ಹೇಳುವುದಾದರೆ ಗಿರಿಯಮ್ಮ ಯಾರಂತೆಯೂ ಕಷ್ಟ ಪಡದೆ ಎಲ್ಲರಂತೆ ಜ್ಞಾನವನ್ನು ಸಂಪಾದಿಸಿ ಎಲ್ಲರಿಗಿಂತ ಅಧಿಕವಾಗಿ ಪರಮಾತ್ಮನೊಡನೆ ಕೂಡಾಡಿದವಳು

## ಕಂಡೆನೀಗ ರಂಗನಾಥನ

ರಾಗ—ಪೂರ್ವಿ ತಾಳ—ಆದಿ (ತೀನ್‌ತಾಲ)

ಕಂಡೆನೀಗ ರಂಗನಾಥನ ಕಾರುಣ್ಯನಿಧಿಯ
ಕಂಡೆನೀಗ ರಂಗನಾಥನ ।
ಮಂಡಲದೊಳುದ್ದಂಡ ಮೂರುತಿ । ಹಿಂಡುಹಿಂಡು ದೈತ್ಯರ ತಂಡತಂಡದಿ ।
ತುಂಡುತುಂಡು ಮಾಡಿದ ಸ್ವಾಮಿಯಾ ॥ ಪಲ್ಲವಿ ॥

ಕಾಮಪಿತನ ಕೌಸ್ತುಭಹಾರನಾ । ಕಸ್ತೂರಿನಾಮವ ನೇಮದಿಂದ ಧರಿಸಿದಾನತ ।
ವಾಮಭಾಗ ಲಕ್ಷ್ಮಿ ಸಹಿತ ಹೇಮಮಂಟಪದೊಳಗೆ ಕುಳಿತು ।
ಕಾಮಿಸಿದ ಭಕ್ತರಿಗೆ ಕಾಮಿತಾರ್ಥ ಕೊಡುವ ಸ್ವಾಮಿ ॥ ೧ ॥

ಗರುಡವಾಹನವೇರಿ ಗಮಕದಿ । ಚರಿಸುತ ಬಂದು ।
ಸರಸಿಯೊಳು ಕರಿಯ ಸಲುಹಿದಿ ॥
ಪರಮಭಕ್ತರ ವಾಸುದೇವ ಅರುಣವಾರಿಧಿ ಕಮಲನಯನ ।
ಉರಗಶಯನ ಉದ್ಧಾರಿ ನಿನ್ನ ಮೊರೆಯಹೊಕ್ಕೆ ಕಾಯೋ ಎನ್ನ ॥ ೨ ॥

ಇಂದುಧರನ ಸಖನೆ ಕೇಳಯ್ಯ । ಬಂದಂಥ ದುರಿತ
ಹಿಂದುಮಾಡಿ ಮುಂದೆ ಸಲಹಯ್ಯಾ ॥
ತಂದೆಯಡಿಯ ಹೊಂದಿದೇನು ಇಂದು ಹೆಳವನಕಟ್ಟೆ ರಂಗ ಆ — ।
ನಂದಪಡಿಸೊ ರಾಮಲಿಂಗ । ಹೊಂದಿದೇನು ನಿನ್ನ ಚರಣ ॥ ೩ ॥

## ಬಕ್ತಳ ಬನ್ನ ಪರಾಕು

ರಾಗ—ಕಾಂಬೋಧಿ (ಭೂಪ) ತಾಳ—ರೂಪಕ (ತೀನ್‌ತಾಲ)

ಭಕ್ತಳ ಬನ್ನ ಪರಾಕು । ಭಾಗ್ಯದ ನಿಧಿಯೆ ॥ ಪಲ್ಲ ॥

ನಿನ್ನ ನಂಬಿದೆ ನೀರಜಾಕ್ಷ ಪರಾಕು ।
ನಿನ್ನ ರನ್ನೆಯ ಒಲುಮೆ ಬೇಕು ಪರಾಕು ।
ಅನ್ಯರ ಸಂಗವನೊಲ್ಲೆ ಪರಾಕು ।
ಎನ್ನಪೇಕ್ಷೆಯ ಸಲಿಸೊ ಪರಾಕು ॥ ೧ ॥

ಶೇಷಶಯನ ಶ್ರೀನಿವಾಸ ಪರಾಕು ।
ಸಾಸಿರನಾಮದ ಒಡೆಯ ಪರಾಕು ॥
ದೋಷದುರಿತಹರ ಸ್ವಾಮಿ ಪರಾಕು ।
ಭಾಷೆ ಪಾಲಿಪುದೆನ್ನ ವಾಸುದೇವ ಪರಾಕು ॥ ೨ ॥

ರತಿಪತಿಪಿತ ಮಾಧವನೆ ಪರಾಕು ।
ಆತಿರೂಪ ಎನ್ನಯ್ಯನೆ ಪರಾಕು ॥
ಹಿತವುಂಟಾದರೆ ಕಾಯೊ ಪರಾಕು ।
ಕ್ಷಿರ್ತು ಹೆಳವನಕಟ್ಟೆ ರಂಗ ಪರಾಕು ॥ ೩ ॥

## ಈತ ಲಿಂಗದೇವ ಶಿವನು

ರಾಗ ಸೊಹನಿ ತಾಳ ಏಕತಾಳ

ಈತ ಲಿಂಗದೇವ ಶಿವನು ಆತ ರಂಗ ದಾಮವಿಷ್ಣು ।
ಮಾತನಾಡೊ ಮಂಕುಮನುಜಾ ಮನದಹಂಕಾರ ಬಿಟ್ಟು ॥ ಪ ॥

ವೇದಕ್ಕೆ ಸಿಲುಕದಾತನೀತಾ । ವೇದ ನಾಲ್ಕು ತಂದನಾತಾ ।
ಬೂದಿ ಮೈಯೊಳು ದರಿಸಿದನೀತಾ । ಇದ್ದ ಗಿರಿಯ ಪೊದ್ದನಾತಾ ॥ ೧ ॥

ವ್ಯಾಧನಾಗಿ ಒಲಿದನೀತಾ । ಮಾಧವ ಮಧುಸೂದನಾತಾ ।
ಮದನನ್ನ ಉರುಹಿದನೀತಾ । ಮದನಪುತ್ರನ ಪಡೆದಾತನಾತಾ ॥ ೨ ॥

ಗಂಗೆಯ ಪೊತ್ತಾತನೀತಾ । ಹಾಂಗೆ ಗರುಡಗಮನನಾತಾ
ತುಂಗ ಹೆಳವನಕಟ್ಟೆ । ಲಿಂಗನೀತಾ ರಂಗನಾಥಾ ॥ ೩ ॥

## ಪಾಪಿಯೊಳು ನಾ ಬಂದೆ

ಪಾಪಿಯೊಳು ನಾ ಬಂದೆ ಪರದೇಶಿ ನಾನಾದೆ ।
ಕಾಪಾಡುವರ ಕಾಣೆ ಕೈಪಿಡಿ ಆಪತ್ತು ಬಂದ ಕಾಲಕ್ಕೆ ।
ಆರಯ್ವರೊಬ್ಬರಿಲ್ಲ ಶ್ರೀಪತಿಯೆ ಕಡೆಹಾಯಿಸೋ ॥
ತಂದೆ ತಾಯೆಂಬುದನು ನಾನೊಂದು ಗುರುತನರಿಯೆ ನಿಮ್ಮ ।
ಕಂದಳೆಂದೆನಿಸಿ ಕಡೆಹಾಯಿಸೋ ಹೆಳವನಕಟ್ಟೆ ರಂಗ ॥

## ಕಡೆಗಣ್ಣಿನಲಿ ನೀ ನೋಡದಿರೆನ್ನಯ್ಯಾ

ರಾಗ–ಜೀವನಪುರಿ ತಾಳ–ಕೇರವಾ

ಕಡೆಗಣ್ಣಿನಲಿ ನೀ ನೋಡದಿರೆನ್ನಯ್ಯಾ । ಬಿಡಬೇಡವೊ ಕೈಯಾ ॥
ಬಡವರ ಬಂಧು ಬಹು ಕೃಪಾಸಿಂಧು ।
ಒಡೆಯ ನೀನಲ್ಲದೆ ನಮಗೆ ಬ್ಯಾರಿಲ್ಲವೊ ॥ ಪ ॥

ಶತ ಅಪರಾದವ ಮಾಡಿದೆನಯ್ಯಾ । ಸೇರಿದೆ ನಾ ನಿನ್ನ ಬೆನ್ನಾ ।
ಅತಿ ಪಾತಕಿ ಅಜಮಿಳನ ಉದ್ಧರಿಸಿದೆ ।
ಪೃಥಿವಿಯೊಳಗೆ ಬಿರುದಾಂತ ಶ್ರೀಕಾಂತ ॥ ೧ ॥

ನೆಲೆಗಾಣದೆ ನಾನಾ ಪರಿ ಚಿಂತಿಸಿ । ಒಳಗಾದೆನೊ ಹೀಗೇ ।
ಬಳಲಿಸಬ್ಯಾಡವೊ ಭಕ್ತಕುಟುಂಬಿ ।
ನಳಿನದಳಾಂಬಕ ನೀ ಸಲಹೆನ್ನನು ॥ ೨ ॥

ಸಾರಿ ಹೇಳುವೆ ಎನ್ನಯ ಬಳಗದ । ಆರಾಭಾರ ನಿನ್ನದು ।
ಹೇರೊಪ್ಪಿಸಿದ ಮ್ಯಾ ್ಯಲ್ಯಾತರ ಸುಂಕವು।
ಕಾರುಣ್ಯನಿಧಿ ಹೆಳವನಕಟ್ಟೆ ರಂಗಯ್ಯಾ ॥ ೩ ॥

## ಭಕ್ತವತ್ಸಲನೆಂಬ ಬಿರುದು ಬಿಡದಿರುವ ದೇವ

ರಾಗ ಭೂಪ ತಾಳ ಝಪ್

ಭಕ್ತವತ್ಸಲನೆಂಬ ಬಿರುದು ಬಿಡದಿರು ದೇವ ।
ಬಹು ಪರಾಕೆಲೊ ಮುರಾರಿ ॥
ಶಕ್ತ ನೀನೆಂದು ನಂಬಿರುವೆ ಕೃಪಾಸಿಂಧು ।
ರಾಕ್ಷಸಾಂತಕ ಸಲಹೊ ರಾಜೀವದಳನೇತ್ರಾ ॥ ಪಲ್ಲ ॥

ಮತ್ತೆ ಗಜ ಮೈಮರೆದು ಸುತ್ತಿ ಕೆಸರೊಳು ಬಿದ್ದು ।
ಶಕ್ತಿಹೀನನಾಗಿ ಬಳಲುತಾಗಿದೆ ॥
ಮತ್ತಾರಿಗಳವಲ್ಲ ಮಂದರಾದ್ರಿ ಧರನೆ ।
ಎತ್ತಿ ಕರಹಾಯಿಸೊ ಎನ್ನೊಡೆಯ ಶ್ರೀಹರಿಯೆ ॥ ೧ ॥

ನಿಂದ ನೆಲ ಮುನಿವುತಿದೆ ನಿಪ್ರುಣತನವಡಗಿತು ।
ಮಂದಮತಿ ವೆಗ್ಗಳಸಿ ನೆಲೆಗಾಣೆ ಮುಂದೆ ॥
ತಂದೆ ನೀನಲ್ಲದಿನ್ನಾರು ರಕ್ಷಿಪರಯ್ಯ ।
ಬಂದನೆವ ಪರಿಹರಿಸೊ ಭಯನಿವಾರಣ ಹರಿಯೆ ॥ ೨ ॥

ಕೊಂಡೆಯರ ಕೆಡಮೆಟ್ಟಿ ಕುಹಕಿಗಳ ಮಸ್ತಕವ ।
ಚೆಂಡಾಡಿದ ಚಿನ್ಮಯರೂಪ ನೀನು ॥
ದಿಂಡರಿದು ದುರುಳರನು ದುರಿತಗಳ ಸಂಹರಿಸಿ ।
ಪಾಂಡವರಿಗೊಲಿದು ಪಾಲಿಸಿದ್ಯೊ ಪುಂಡರೀಕಾಕ್ಷ ॥ ೩ ॥

ನಾಲ್ಕು ದಿಕ್ಕಿಗೆ ನಾಲ್ಕು ಪರಿಯ ಬಂಧನದಿಂದ ।
ವ್ಯಾಕುಲದಿ ಕೃಷ್ಣಾಮೃಗವು ಎದೆಗುಂದಿರೆ ॥
ವಾಕಾರವರಿಸುವ ಸಮಯದಲಿ ವೃಷ್ಟಿಯ ಕರೆದು ।
ಜೋಕೆಯಲಿ ಪಥವನೇರಿಸಿದ್ಯೊ ಜಗದೀಶಾ ॥ ೪ ॥

ನಿನ್ನನೆ ಪೂಜಿಪೆನು ನಿನ್ನನೆ ಪಾಡಿ ಪೊಗಳುವೆನು ।
ನಿನ್ನನೆ ನಂಬಿದ್ದವಳಿಗಿಂಥಾ ॥
ಉನ್ನತವಾದ ಕಂಟಕವು ಬಂದಿದೆ ಕಾಯೊ ।
ಪನ್ನಂಗಶಯನ ಹೆಳವನಕಟ್ಟೆ ರಂಗಯ್ಯಾ ॥ ೫ ॥

## ರಕ್ಷಿಸೆ ಏಕನಾಥೆ ತಾಯೆ ದಯದಿಂದ

ರಾಗ—ಹಂಸಧ್ವನಿ ತಾಳ—ತೀನ್‌ತಾಲ

ರಕ್ಷಿಸೆ ಏಕನಾಥೆ ತಾಯೆ ದಯದಿಂದ ಎನ್ನನು ।
ಸೊಕ್ಕಿದ ದೈತ್ಯಸಂಹಾರೆ ದೀನಜನೋದ್ಧಾರೆ ॥ ಪಲ್ಲ ॥

ಶ್ರೀಶರ್ವಾಣಿ ಶಂಕರಿ ದುರಿತನಿವಾರಿ ಶರಣರ ಸಲಹುವ ಕಾಂತೆ । ಏಳರದೆಗುರಂತೆ ॥
ನಿಡಿಗುರುಳು ಬಾಲೆ ನಾಯಕಿ । ಪಲ್ಲವಪಾಣಿ ಸುರರ
ಸಲಹುವ ಕಾಂತೆ ಅಖಿಲ ದೇವಕಾಂತೆ ॥ ೧ ॥

ಆಳುವಾಡುವರಂಗ ಅದೇನರಿತು ಭಂಗ ಬಹಳ ಬಡಿಸಿದೆಯವ್ವ । ಭಕ್ತರುದ್ಧಾರಿ ॥
ಕಾಳಗದೊಳು ಕಂಶೀರೆ ಕರೆದು ಅಭಯವನೀವೆ । ಪೇಳಲೆನ್ನಳವೆ
ಸುಕೃತ ಪಂಥಗಾರತಿ ॥ ೨ ॥

ಹಿಂದು ಭೂತಂಗಳಿಗೆಲ್ಲ ಹೆಚ್ಚಿನ ಬಿರುದನೆ ತಾಳ್ದೆ ಚಂಡಿಚಾಮುಂಡಿ
ತ್ರೈಲೋಕಕ್ಕೆ ತಾಯಿ । ಮಾಂ ಪಾಹಿ ।
ಅಂಡಪವಿತ್ರೆ ಶುಭಗಾತ್ರೆ ನಂಬಿದ ಭಕ್ತರ ಸಂಪ್ರೀತೆ ಕಂಡು
ನಮಿಸುವರ ಕಾಯ್ವೆ । ಕಾಮಿತದಾತೆ || ೩ ||

ಇಂದ್ರಾದಿ ದಿಕ್ಪಾಲಕರು ವಂದಿಸಿ ಸ್ತುತಿಮಾಡಲವರ
ಬಂದನವ ಪರಿಹರಿಸಿದಿಯೋ । ಚಂದ್ರಮುಖಿಯೆ।
ಇಂದು ಬಂದ ಬಂಧನವ ಬಿಡಿಸಿ ಇಂದು ಎನ್ನ ನೀ ಕಾಯೆ। ತಾಯೆ || ೪ ||

ಮಲೆತ ಮಹಿಷಾಸುರನ ಕೊಂದೆ ಮಲೆಯುಬೆನ್ನೂರಲಿ ನಿಂದೆ ।
ಬಲು ನೇಮವಂತೆ।
ಸಂತೆ ಹರವೀಲಿ ನಿಂತೆ । ಪುಲ್ಲಲೋಚನೆ ಪ್ರಖ್ಯಾತೆ ।
ಪರಶುರಾಮನ ಮಾತೆ ಹೆಳವನಕಟ್ಟೆ ರಂಗನ ಸಹೋದರಿ || ೫ ||

## ನಿನ್ನ ನಂಬಿದವರ ಕಾಯೊ

ರಾಗ ನಾಟಿ (ಶಂಕರಾ) ತಾಳ ಏಕ

ನಿನ್ನ ನಂಬಿದವರ ಕಾಯೊ ನಿಜವುಳ್ಳ ದೇವಾ ।
ಎನ್ನನು ಉದ್ಧರಿಸಿ ಕಾಯೊ ಕರುಣಿ ವೆಂಕಟಾ || ಪಲ್ಲ ||

ಸುರಪತಿ ಮುನಿದು ಮಳೆಗರೆಯಲೇಳುದಿನವು ಬಿಡದೆ ।
ತುರುಗಳೆಲ್ಲಾ ಸೊರಗಿ ಬಾಯಬಿಡುತಿರಲು ।
ಬೆರಳಿನಿಂದ ಗೋವರ್ಧನ ಗಿರಿಯನೆತ್ತಿ ಗೋಗಳನ್ನು ।
ಉದ್ಧರಿಸಿ ಕಾಯ್ದೊ ಶ್ರೀ ಕರುಣಾಸಿಂಧು ಕಮಲಲೋಚನ || ೧ ||

ಮಡುವಿನೊಳಗೆ ಮಲೆತ ನೀರು ಕುಡಿಯ ಬಂದ ಗಜವ ನೆಗಳೆ ।
ಬಿಡದೆ ಕಾಲ ಕಚ್ಚಿ ಭಂಗಬಡಿಸುತಿರಲು ।
ತಡೆಯಲಾರದೆ ಪ್ರಾಣಬಿಡುವ ಸಮಯದಲ್ಲಿ ಬಂದು ।
ಕಡಹಿ ಚಕ್ರದಿಂದ ನೆಗಳೆ ಕರಿಯ ಸಲಹಿದೆ || ೨ ||

ಮತ್ತೆ ಮಂದಜ್ಞಾನದಿಂದ ಮೆಯ್ಯ ಮರೆತು ಬರಲು ಸ್ತನವ ।
ತುತ್ತು ಮಾಡಿ ಪಿಡಿದು ಕುದುರಿ ಕ್ರೂರ ದಂಡದಿ ।
ಕತ್ತರಿಸುವ ಸಮಯದಲ್ಲೆ ಕಡೆಗೆಮಾಡಿ ಕಾಯೊ ಎನ್ನ ।
ಕರ್ತ ಹೆಳವನಕಟ್ಟೆ ಕರುಣಿ ವೆಂಕಟ || ೩ ||

## ರಾಮ ಶ್ರೀ ರಘುನಂದನ

ರಾಗ ಬೊಪ್ ತಾಳ ಝಪ್

ರಾಮ ಶ್ರೀ ರಘುನಂದನ। ರಘುನಂದನ । ಶರಣು ಸಾರ್ವಭೌಮ
ಭೂಸುರವಂದ್ಯನ।
ಸೋಮಶೇಖರ ಮಿತ್ರ ಕಾಮಿತ ಫಲಪಾತ್ರ । ಕಾಮಧೇನು
ವಿಶ್ವ ಬೀಮಸನ್ನುತ ಸೀತಾ ॥ ಪಲ್ಲ ॥

ಕ್ರೂರ ದಾನವ ಸಂಹಾರ । ಕೌಸಲ್ಯಾಕುಮಾರ ।
ಭೂಭಾರಹರ ಭಜಕಜನೋದ್ಧಾರ ವೇದಾಂತಸಾರ ।
ಚಾರುವದನ ಮಣಿಹಾಸ ಕುಂಡಲಧಾರ ವೀರರಾಘವ
ವಿಶ್ವಾಧಾರ ಕರುಣ ಸೀತಾ ॥ ೧ ॥

ಪಾಪರಹಿತಪಾವನ ಅಹಲ್ಯಾ । ಶಾಪಖಂಡನ ಚರಣ
ಚಿನುಮಯ ದಿವ್ಯರೂಪ ರಮಾರಮಣ ।
ತಾಪವಿಚ್ಛೇದನ ತಾಮಸ ಗುಣಹರನ।
ದಯಾಪರಬ್ರಹ್ಮಸ್ವರೂಪ ಮೂರುತಿ ಸೀತಾ ॥ ೨ ॥

ಮದನಕೋಟಿ ಮೋಹನಾಂಗ । ಮಾದವ ಪುಣ್ಯಚರಿತ
ಕರುಣ ಕೃಪಾಂಗ ಹೆಳವನಕಟ್ಟೆನಿಲಯ ವೆಂಕಟ ಶ್ರೀರಂಗ ।
ಸದಾನಂದ ಸುಮತೀಂದ್ರ ಹೃದಯ ಪಂಕಜ ಭೃಂಗ ।
ಕದನವಿಕ್ರಮಬಾಹು ಕೋದಂಡಧೃತ ಸೀತಾ ॥ ೩ ॥

## ಅರುಹಬಾರದೆ ನಿಮ್ಮ ಚರಿತೆಯನು*

* ಟೀಪು—ಪುಂಗನೂರಿನ ಅರಸನಿಗೆ ನೇತ್ರದಾನ ಮಾಡಿಸಿದಾಗಿನ ಸ್ತುತಿಗೀತವಿದೆಂದು ಪ್ರತೀತಿ

ರಾಗ—ರೇಗುಪ್ತಿ (ಆನಂದಭೈರವಿ) ತಾಳ—ರೂಪಕ (ದೀಪಚಂದಿ)

ಅರುಹಬಾರದೆ ನಿಮ್ಮ ಚರಿತೆಯನು ।
ನರಲೋಕದೊಳು ನಗೆಗೇಡು ಮಾಡದ ಹಾಂಗೆ ॥ ಪಲ್ಲ ॥

ಕಲ್ಲೊಳು ಕಾಂತೆಯ ಮಾಡಿದೆಯೆಂದು ।
ಹೇಳುತಲಿಹರು ಮೂರ್ಜಗದೊಳಗೆ ॥
ಅಲ್ಲಿ ತೋರಿಸಿಧಾಂಗೆ ಇಲ್ಲಿ ತೋರಿಸಿದರೆ ।
ಬಲ್ಲಿದನ್ನೊಡೆಯ ದೊಡ್ಡವನೆಂದು ಪೊಗಳುವೆ ನಾ ॥ ೧ ॥

ತ್ರಿಭಂಗಿಯಾಗಿದ್ದ ಕುಬ್ಜೆಯ ತನುಯೆತ್ತಿ ।
ನವಯೌವನೆಯ ಮಾಡಿದೆ ಎಂಬರು ॥
ಬಹು ಪರಾಕ್ರಮವನು ಈಗ ತೋರಿಸಿದರೆ ।
ಅಹುದೊ ಎನ್ನೊಡೆಯ ದೊಡ್ಡವನೆಂದು ಸಾರುವೆ ನಾ ॥ ೨ ॥

ನೀನೇ ಗತಿಯೆಂದು ನಂಬಿದ ಭಕ್ತನ ।
ಕಣ್ಣೊನವ ತಿದ್ದಿ ನಿಜವ ತೋರಿಸಯ್ಯಾ ॥
ದೀನದಯಾಳು ಹೆಳವನಕಟ್ಟೆ ರಂಗಯ್ಯಾ ।
ದಾನಿ ಎನ್ನೊಡೆಯ ದೊಡ್ಡವನೆಂದು ಹೇಳುವೆ ನಾ ॥ ೩ ॥

## ಮಳೆಯ ದಯಮಾಡೊ ಶ್ರೀರಂಗಾ

* ಮಳೆ ತರಿಸಲೆಂದು ಹಾಡಿದ ಕೀರ್ತನೆಯಿದು – ಎಂದು ಪ್ರತೀತಿ

ರಾಗ ಸಾವೇರಿ (ಬಹಾರ) ತಾಳ ತೀನ್‌ತಾಲ

ಮಳೆಯ ದಯಮಾಡೋ ಶ್ರೀರಂಗಾ ನಿಮ್ಮ ।
ಕರುಣ ತಪ್ಪಿದರೆ ಉಳಿಯದೀ ಲೋಕಾ ॥ ಪಲ್ಲ ॥

ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ ।
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು ॥
ತೃಷೆಯಡಗದೆ ತಲ್ಲಣಿಸಿ ಮೂರ್ಛೆಯಗೊಂಡು ।
ದೆಶದೆಶೆಗೆ ಬಾಯಿಬಿಡುತಿಹವಯ್ಯ ಹರಿಯೆ ॥ ೧ ॥

ಧಗೆಯಾಗಿ ಇನ್ನೂ ದ್ರವಗುಂದಿದ ಭಾವಿಯ ನೀರು ।
ಮಗಿಮಗಿದು ಪಾತ್ರೆಯಲಿ ನಾರಿಯರು ॥
ಹಗಲೆಲ್ಲ ತರುತಿಹರು ಯೋಚನೆಯ ಮಾಡುತ್ತ ।
ಬೇಗದಿಂದಲಿ ತರಿಸೊ ವೃಷ್ಟಿಯನು ಹರಿಯೆ ॥ ೨ ॥

ಸಂದುಹೋದವು ಜ್ಯೇಷ್ಠ ಆಷಾಢ ಶ್ರಾವಣ ।
ಬಂದಿದೆ ಭಾದ್ರಪದ ಮಾಸವೀಗ ॥
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೋ ।
ಸಂದೇಹವಿನ್ಯಾಕೆ ಹೆಳವನಕಟ್ಟೆ ರಂಗಾ ॥ ೩ ॥

## ಕೃಷ್ಣವೇಣಿ ಸ್ತೋತ್ರ

ರಾಗ ದೇಸ್ ತಾಳ ದೀಪಚಂದಿ

ಬಿಟ್ಟೆಯ ನೆವದಲ್ಲಿ ಪೋಗಿ ಕಟಕವನು ಕಣ್ಣು ತೆರದೆ ।
ಕೃಷ್ಣವೇಣಿ ನಿಮ್ಮ ನಾ ಕಂಡೆ ।
ದುಷ್ಟ ಮಾನವರ ಬಾದೆಗಂಜುತಲಿ ನಾ ಬಂದೆ ।
ಕಷ್ಟ-ದುರಿತಗಳ ಕಳೆಯೆ ತಾಯೆ ॥ ಪಲ್ಲವಿ ॥

ಭೋರಿಡುವ ಮಳೆಗೆ ಹಲ್ಲುಗಿಟಗರಿದು ಶೀತ ತಲೆಗೇರಿ ಕಂಪಿಸಿ ನಡುಗುತ್ತ ।
ಜಾರಿ ಕೆಸರೊಳು ಬಿದ್ದು ಅಲ್ಲಿ ಬಿದ್ದೇಳುತಲಿ ದಾರಿಯನು ಕೇಳಿಕೊಳ್ಳುತ್ತ ।
ಕ್ರೂರವಾಗಿದ್ದ ಜಾಲಿಯ ಮುಳ್ಳನೆ ತುಳಿದು ಹರಿನಾರಾಯಣಾ ಎನ್ನುತ್ತ ।
ಹಾರೈಸಿಕೊಂಡು ನಿಮ್ಮ ದರುಶನಕೆ ನಾ ಬಂದೆ
ಘೋರ ದುರಿತವನು ಕಳೆಯೆ ತಾಯೇ ॥ ೧ ॥

ನಿತ್ಯಕಲ್ಯಾಣಿ ನಿರ್ಜರಸ್ತೋತ್ರೆ ಶುಭಗಾತ್ರೆ ಪ್ರತ್ಯಕ್ಷ ವಿಷ್ಣುಜಾತೆ ಮಾತೆ ।
ಸತ್ತು ಹುಟ್ಟುವದೊಂದು ಕೋಟಲೆಯಿ ಖಂಡಿಸುವೆ ಪತಿತಪಾವನ ಚರಿತೆ ।
ವ್ಯರ್ಥವಾಗಿದೆ ಜನುಮ ಸಾರ್ಥಕವ ಮಾಡಮ್ಮ
ಮುಕ್ತಿಸಾಧನಕೆ ದಾತೆ ಮಾತೆ ॥ ೨ ॥

ಸುರಗಂಗೆ ಕೃಷ್ಣೆ ಮಲಾಪಹಾರಿ ಮೂವರು ಬೆರೆತಿದ್ದ ಸಂಗಮದೊಳು ।
ಅರಿಷಿಣಾಕ್ಷತಿಗಂಧ ಕುಂಕುಮ ಕದಾಂಬುಗಳ ಹರುಷದಿಂದೊಪ್ಪಿಸುತಲಿ ।
ಥರಥರದಿ ನೆರೆದ ಮುತ್ತೈದೆಯರು ಕೂಡಿ ಮರದ ಬಾಗಿಣವ ಕೊಡುತಲಿ ।
ಹರುಷದಿಂದಿಪ್ಪ ಮಾನವರ ನಾ ಕಂಡೆ
ಅರಸು ಹೆಳವನಕಟ್ಟೆ ರಂಗನ ಕೃಪೆಯಲಿ ॥ ೩ ॥

## ಹೊನ್ನು ತಾ ಗುಬ್ಬಿ ಹೊನ್ನು ತಾ*

* ಗುಬ್ಬಿಯಿಂದ ಹೊನ್ನುಂಗುರ ತರಿಸಿದಾಗ ಹೇಳಿದ ಹಾಡಿದು — ಎಂದು ಪ್ರತೀತಿ

ರಾಗ ಸಾರಂಗ ತಾಳ ತೀನ್‌ತಾಲ

ಹೊನ್ನು ತಾ ಗುಬ್ಬಿ ಹೊನ್ನು ತಾ । ನಮ್ಮ ।
ಚಿನುಮಯ ಮೂರುತಿ ಚೆಲುವ ರಂಗನ ಕೈಗೆ ॥ ಪಲ್ಲವಿ ॥

ಆಗಮವನು ತಂದು ಜಗಕಿತ್ತ ಕೈಗೆ ।
ಸಾಗರವ ಮಥಿಸಿ ಸುಧೆ ತಂದ ಕೈಗೆ ॥
ತೂಗಿ ಮಾತಾಡುವ ಸ್ಥೂಲಕಾಯನ ಕೈಗೆ ।
ಸಾಗರಪತಿ ನರಸಿಂಹನ ಕೈಗೆ ॥ ೧ ॥

ಬಲಿಯ ದಾನವ ಬೇಡಿಕೊಂಡಂಥ ಕೈಗೆ ।
ಛಲದಿಂದ ಛತ್ರೇರ ಅಳಿದಂಥ ಕೈಗೆ ॥
ಗೆಲವಿಂದ ವಿಭೀಷಣಗಭಯವಿತ್ತಾ ಕೈಗೆ ।
ಬಲುಬೆಟ್ಟ ಬೆರಳಲ್ಲಿ ಇಟ್ಟಂಥ ಕೈಗೆ ॥ ೨ ॥

ಪತಿವ್ರತೆಯರ ವ್ರತವಳಿದಂಥ ಕೈಗೆ ।
ಹಿತವಾಜಿಯನೇರಿ ಮರ್ದಿಸಿದಂಥ ಕೈಗೆ ॥
ಪತಿಶಿರೋಮಣಿ ಲಕ್ಷ್ಮೀಕಾಂತನ ಕೈಗೆ ।
ಚತುರ ಹೆಳವನಕಟ್ಟೆ ರಂಗನ ಕೈಗೆ ॥ ೩ ॥

## ಪದುಮನಾಭನೆ ನಿನ್ನ ಪಾದಕಿಂಕರ ನನ್ನ*

* ಶಿಶುವಿಗೆ ಪ್ರಾಣದಾನ ಮಾಡಲು ಕೇಳಿಕೊಂಡ ಸ್ತುತಿಗೀತವಿದೆಂದು ಪ್ರತೀತಿ

ರಾಗ ಪೂರ್ವಿ (ಬಸಂತ ಬಹಾರ) ತಾಳ ಆದಿ (ಝಪ್)

ಪದುಮನಾಭನೆ ನಿನ್ನ ಪಾದಕಿಂಕರ ನನ್ನ ।
ಕೈ ಬಿಡುವುದುಚಿತವೇ ರಂಗಾ ॥ ಪ ॥

ಮುದದಿಂದ ನಿನ್ನ ಪಾದಕೆರಗುವೆ ನಾನು ।
ತ್ವರಿತದಿ ನೀ ಕಾಯೊ ಎನ್ನೊಡೆಯ ರಂಗಾ ॥ ಅ ಪ ॥

ಅಜಗರಶಯನನೇ ಬುಧಜನನಮಿತನೇ ।
ತ್ರಿಜಗವಂದಿತಪಾದ ಪದುಮಜನಕನೇ ॥ ೧ ॥

ಶಿಶು ಅವತಾರದಿ ಪಶುಗಳ ಸಲಹಿದೆ ।
ಶಶಿಭೂಷಣಸಖಾ ಶಿಶುವ ಕಾಪಾಡೊ ॥ ೨ ॥

ಸಾಂದೀಪನಿಗೊಲಿದೆ ಸಂದೇಹವಿಲ್ಲದೆ ।
ತಂದೆ ಹೆಳವನಕಟ್ಟೆ ರಂಗ ಕೃಪಾಂಗ ॥ ೩ ॥

## ದೇವರಗುಡ್ಡದ ಮೈಲಾರಲಿಂಗನ ಸ್ತುತಿ

ರಾಗ ಮುಖಾರಿ (ಭೈರವಿ) ತಾಳ ರೂಪಕ (ಝಂಪ್)

ಬಾರನ್ಯಾತಕೆ ನೀರೆ ನೀ ಕರತಾರೆ ಸುಗುಣಗಂಭೀರನಾ ॥ ಪ ॥

ಮೂರು ಲೋಕ ಸಂಚಾರ ಸಾಗರಾಧೀರ ತೇಜಿಯನೇರಿ ಮೆರೆವನಾ ॥ ಅ ಪ ॥

ಕೋಮಲಾಂಗನು ಕಂತುದಹನನು ಸೋಮಾರ್ಕ ಶಿಖನೇತ್ರನು ।
ವಾಮದೇವನು ವನಜಭವ ಮುನಿಸ್ತೋಮ ನಮಿತ ಎನ್ನ ಪ್ರೇಮ ಬೇಗದಿ ॥ ೧ ॥

ನೀಲಕಂಠನು ನಿಗಮಸಾರನು ಬಾಲಶಶಿಧರ ಭಾರ್ಗನು ।
ಶೀಲಸದ್ಗುಣ ಫಾಲನೇತ್ರನು ಕಾಲಾಂತಕ ಎನ್ನ ಕಾಯೊ ಬೇಗದಿ ॥ ೨ ॥

ಮಂಗಳಾತ್ಮನು ಮಲ್ಲರಿಪು ದೇವೋತ್ತುಂಗ ಹೆಳವನಕಟ್ಟೆಯ ।
ರಂಗಗತಿಸಖನಾದ ನೀಲಗಿರಿ ಲಿಂಗ ಮಾಲತಿಸಂಗ ಬೇಗದಿ ॥ ೩ ॥

## ಕೊಕ್ಕನೂರು ಹಣಮಂತದೇವರ ಸ್ತುತಿ

ರಾಗ ಸೊಹನಿ ತಾಳ ದಾದರಾ

ಈತ ಅಂಜನೆಸುತನು ಭೀಮರಾಯನು ॥ ಪಲ್ಲ ॥

ಈತ ರಾಮರ ಬಂಟನು ।
ಈತ ಕೋಟಿ ಲಿಂಗವನು ರೋಮರೋಮಕ್ಕೆ ಧರಿಸಿ ।
ಈತ ಲೋಕಪ್ರಖ್ಯಾತನು ಭೀಮರಾಯನು ॥ ಅ ಪಲ್ಲ ॥

ಪುಟ್ಟಿದಾಗಲೇ ಗಗನಮಂಡಲವನ್ನು ಮುಟ್ಟಿ ರವಿಯನು ತುಡುಕಿ ।
ಇಟ್ಟ ಕೈಪ ಕುಂಡಲವನ್ನು ತೊಟ್ಟು ಮೆರೆವಂಥ ದಿಟ್ಟ ಹನುಮರಾಯನು ॥ ೧ ॥

ಮುಂಚೆ ಕಂಠವನ ಸ್ವಾಮಿಯ ಅಂದು ಸೇವೆಯ ವಂಚನಿಲ್ಲದೆ ಮಾಡಿದಿ ।
ಅಂಚೆಗಮನೆ ಸೀತಾದೇವಿಗುಂಗುರವಿತ್ತ ಮಿಂಚುಳ್ಳ ವನವ
ಕಿತ್ತನು ಭೀಮರಾಯನು ॥ ೨ ॥

ತಂತ್ರದರಸ ಶೂರನು ಸಂಗ್ರಾಮದಿ ಮಾರಾಂತ ವೀರರಾ ಗೆಲಿದೆ ।
ಪಂಥದಿ ಸಂಜೀವನವ ತಂದು ಲಕ್ಷ್ಮಣಗಿತ್ತೆ ಅಂತಕನ್ನೆದಾ
ಶೂಲವು ಭೀಮರಾಯನು ॥ ೩ ॥

ಲಂಕಿಣಿಯನೆ ತುಡುಕಿ ಮಾಯಾಜಾಲವ ಶಂಕೆಯಿಲ್ಲದೆ ಗೆಲಿದೆ ।
ಲಂಕಾಪಟ್ಟಣವ ಸುಟ್ಟು ರಾವಣೇಶ್ವರನ ಅಹಂಕಾರವಳಿದ
ದೀರಾ ಭೀಮರಾಯನು ॥ ೪ ॥

ಲೆಕ್ಕವಿಲ್ಲದ ಖಳರ ಗೆಲಿದು ಬಂದು ಕೊಕ್ಕನೂರೊಳು ನಿಂತಾನು ।
ರಕ್ಕಸಾಂತಕ ಹೆಳವನಕಟ್ಟೆ ರಂಗಯ್ಯನ ಅಕ್ಕರುಳ್ಳತಿದಾಸನು ಭೀಮರಾಯನು॥ ೫ ॥

## ಗೋಕರ್ಣೇಶ್ವರನ ಸ್ತುತಿ

ರಾಗ ಹಿಂಡೋಲ ತಾಳ ದೀಪಚಂದಿ

ವಿಶ್ವಪತಿ ಇಂದುಶೇಖರ ಸುರ ಮಸ್ತಕಮಣಿ ಮನ್ಮಥರಿಪುವೇ ।
ವಿಸ್ತರಿಪೆನು ನಿಮ್ಮ ಮಹಿಮೆಯ ಜಗದೊಳು ಸ್ವಸ್ಥವಾಗಿಹುದು ॥ ಪಲ್ಲವಿ ॥

ಎಲ್ಲಿ ನೋಡಲು ಲಿಂಗಮಯಗಳು ಅಲ್ಲಿಗಲ್ಲಿಗೆ ತೀರ್ಥಯಾತ್ರೆಯು ।
ಸೊಲ್ಲುಸೊಲ್ಲಿಗೆ ಹರಮಹಾದೇವಂತೆಲ್ಲವರು ಸ್ತುತಿಸುವರು ।
ಬಲ್ಲವರು ಇದು ಭಾವಿಸಿ ಕಾಶೀಲಿಂದ ಮಹಿಮೆವೆಗ್ಗಳ ವಾಹುದೆನುತಾ ।
ಸುಲಕ್ಷಣೆ ಶಿವನ ಗಾತ್ರೆ ಶಿವನ ವಲ್ಲಭೆ ತ್ರಾಸಿನಲಿ ತೂಗುವಳು ॥ ೧ ॥

ನಾಟಕದಿ ನಾನಾಜನ್ಮದಿ ಬಂದು ದಾಟದಂತರವನಳಿದನು ಚಂದ್ರ ।
ಜೂಟ ಸಖನಂಘ್ರಿಗೆ ಪ್ರಾರ್ಥನು ಈ ಬಯಲಾದನು ಸೂಟಿಯೆನಗಾಯಿತು ।
ಕೋಟಿ ತೀರ್ಥದಿ ಮಿಂದು ಮೈಯ ಕೋಟಲೆ ಸಂಸಾರಗಳಿಲ್ಲ ।
ದಾಟಿದೆನು ಇನ್ನು ಜನನ ಮರಣಗಳೆಂಬೋಪಾಯಗಳಿಲ್ಲವೋ ॥ ೨ ॥

ಶೂರ್ಪದಲಿ ಬಂದು ಸೂಸುವ ತೆರೆಗಳು ಅಬ್ರದಿಂದಲಿ ।
ಅಪ್ಪಳಿಸಲು ಉನ್ನತ ಭ್ರಮೆಗೊಂಡಿದ್ದ ಕರ್ಮದ ಬಲಿಗಳು ಮಿಗಿಲಾದವು ।
ಉರ್ವಿಯೊಳಗುಳ್ಳ ಸಕಲ ನದಿಗಳನು ಗರ್ಭದಲಿ ಇಂಬಿಟ್ಟು ಮೆರೆದಂತಿಹ ।
ಸರ್ಬೆಗೂಡಿಸುವ ಸಿಂದುರಾಜನಲಿ ಮಿಂದು ನಿರ್ಭಯಳಾದೆನು ॥ ೩ ॥

ಬಲಿದ ದನುಜರ ಭಾವಕ್ಕೆ ಮೆಚ್ಚಿ ಒಲಿದಷ್ಟವರವಿತ್ತೆ ।
ಸಿಲುಕಲು ಸುಲಭನೆಂದು ಹೇರಂಬಳೊಲತ್ತೆ ।
ನೆಲೆಗೊಳಿಸಿ ಎಳೆದರೆ ಯಳಿತುಲೊಲ್ಲದೆ ।
ಛಲವಿಡಿದ ಲಂಕಾದಿಪತಿಯ ಅಹಂಕಾರವಳಿದು ।
ಇಂದ್ರಾದಿಗಳಿಗೆ ವರವಿತ್ತ ಮಹಾಬಲ ಲಿಂಗನ ಕಂಡೆ ॥ ೪ ॥

ಅನ್ನದ ಶತರಂಗಿ ಪರ್ವತ ಪಶ್ಚಿಮದಿಂದ ಪಾತಾಳಗಂಗೆ ಸಹಿತಲಿ ಪ್ರ– ।
ಸನ್ನನಾಗಿ ನಿಂದ ಚೆನ್ನ ಹೆಳವನಕಟ್ಟೆ ರಂಗನ ಪ್ರಿಯ ।
ಪನ್ನಂಗದರ ಪರಮಪವಿತ್ರ ಗೋಕರ್ಣೇಶನ ಕಂಡೆ ಪಾ– ।
ವನವಾಯಿತು ಎಲ್ಲ ಕುಲಕೋಟಿಯು ॥ ೫ ॥

## ಪಿಳ್ಳಂಗಿರಿ ರಂಗನಾಥನ ವರ್ಣನೆ

ರಾಗ ನಾಟಿ (ದೇಸ್) ತಾಳ ರೂಪ (ಝಪ್)

ಪಾಹಿ ಪರಮಾನಂದ ಪಾಹಿ ಮುನಿಜನ ವಂದ್ಯ ।
ಪಾಹಿ ಖಳಜನ ಬಂಧ ಪಾಹಿ ಗೋವಿಂದಾ ॥ ಪಲ್ಲವಿ ॥

ಪಾಹಿ ಗೋಪಿಯನಾಥ ಪಾಹಿ ಮನ್ಮಥತಾತ ।
ಪಾಹಿ ಲಕ್ಷ್ಮೀಕಾಂತ ಪಾಹಿ ಶ್ರೀಕಾಂತಾ ॥ ಅ ಪಲ್ಲವಿ ॥

ಮತ್ಸ್ಯರೂಪಿಲಿ ಬಂದು ಹೆಚ್ಚಿನ ದೈತ್ಯನ ಕೊಂದೆ ।
ಬೆಚ್ಚರದೆ ಬಹುಗಿರಿಯ ಬೆನ್ನಲಿ ತಾಳ್ದೆ ।
ಬಚ್ಚಿಟ್ಟ ಧರಣಿಯನು ಬಲುಮೆಯಿಂದಲಿ ತಂದೆ ।
ಅರ್ಚಿಸಿದ ಪ್ರಹ್ಲಾದಗೊಲಿದೆ ನರಸಿಂಹ ॥ ೧ ॥

ಕುಬುಜರೂಪಿಲೆ ನೆಲನ ಬೇಡಿ ಬಲಿಯನು ತುಳಿದೆ ಪಿತನಾಡಿದ ।
ಶಬ್ದವನು ಕೇಳಿ ಮಾತೆಯ ಶಿರವನರಿದೆ

ಕೊಬ್ಬಿದ್ದ ರಾವಣನ ಕಂಧರವ ಖಂಡಿಸಿದೆ ।
ಅಬ್ಜಮುಖಿ ಜಾನಕಿಯನಾಳ್ದ ಶ್ರೀರಾಮಾ ॥ ೨ ॥

ತುರುವಿಂಡು ಕಾಯ್ದು ತಪವಳಿದು ಪತಿವ್ರತೆಯರನು ।
ಭರದಿ ವಾಜಿಯನೇರಿ ಚರಿಸುತ್ತ ಬಂದೆ ।
ಕರುಣಾಳು ಹೆಳವನಕಟ್ಟೆ ರಂಗಯ್ಯಾ ಪಿಳಂ— ।
ಗಿರಿ ನೆಲವಾಸ ಶ್ರೀ ವೆಂಕಟೇಶ ॥ ೩ ॥

## ದಾಗಿನಕಟ್ಟೆ ಗೋಟುಗುಣಿ ನರಸಿಂಹದೇವರ ವರ್ಣನೆ

ರಾಗ ಬೈರವಿ ತಾಳ ಕೇರವಾ

ಶ್ರೀ ನರಸಿಂಹದೇವ ಶರಣರಕ್ಷಕ ದಾನವಾರಿ ಸುಭಕ್ತಾದೀನ ಮೂರತಿಯನೆ ॥ ಪ ॥

ಹರಿ ತನ್ನ ಗುರುವೆಂದು ಸ್ಮರಿಸುತಿರಲು ಬಾಲ ।
ನಿರವಕಾಣದೆ ದುಷ್ಟ ಹಿರಣ್ಯಕಾಸುರನನು ।
ಪರಿಯ ಭಂಜಿಸುತಿರೆ ಮೊರೆದು ಕೋಪದಳೆದ್ದು ।
ತರಳಗೊಲಿದೆ ಬಹು ಕರುಣಾನಿದಿಯೆ ॥ ೧ ॥

ಛಿಟ ಛಿಟಲ್ ಭುಗಿ ಭುಗಿಲ್ ಆರ್ಭಟಿಸಿ ।
ಗರ್ಜಿಸಿ ಕಂಭ ಕಿಡಿಯು ಉಗ್ರದಿ ನಿಸ್ಫುಟದಿಯುಬ್ಬಿಸಿದರೆ ।
ಕಟಕಟಿಮಸದಗ್ನಿ ಕಿಟ ಆಗಿವೃತ । ನಿಂದ ಕಠಿಣಮೂರುತಿಯೇ ॥ ೨ ॥

ಕೊಬ್ಬಿದ ಹಿರಣ್ಯಕನುಬ್ಬಮುರಿವೆನೆಂದು ।
ಹೆಬ್ಬಾಗಿಲೊಳು ಸಂಜೆ ಮಬ್ಬಿಲಿ ದನುಜನ ।
ಗರ್ಭವ ನಖದಿಂದ ಇಬ್ಭಾಗವನು ಮಾಡಿ ।
ಹಬ್ಬಿದ ಕರುಳನು ಹರುಷದಿ ಧರಿಸಿದೆ ॥ ೩ ॥

ಭೀತನಾಗಿ ತನ್ನ ತಾತನ ತೊಡೆದಾ ।
ಘಾತಕ ಹರಿಯು ಮಾತನು ಮನ್ನಿಸಿ ।
ಅತಿ ಶಾಂತನಾಗಿ ಪ್ರೀತಿಲಿ ಶಿಷ್ಯನ ಸಲಹಿದ ಅನಾಥ ರಕ್ಷಕನೆ ॥ ೪ ॥

ಖಳನ ಮರ್ದಿಸಿ ಬಹು ಇಳೆಯಿಂದ ಆಜನಿಗೆ ಬಲು ಹರುಷವನಿತ್ತ ।
ಹೆಳವನಕಟ್ಟೆ ಶ್ರೀವಲ್ಲಭ ದಾಗಿನ—ಕಟ್ಟೆ ನೆಲವಾಸ ಕಂಭದ ನರಸಿಂಹ ದೇವಾ ॥ ೫ ॥

## ಮನವೆನ್ನ ಮಾತಕೇಳದು

ರಾಗ ಬೀಮಪಲಾಸ ತಾಳ ದೀಪಚಂದಿ

ಮನವೆನ್ನ ಮಾತ ಕೇಳದು ಮಂದ ಜ್ಞಾನದಿ ।
ತನುವಿನಾಶೆಯ ಬಿಡಲೊಲ್ಲದು ॥ ಪಲ್ಲವಿ ॥

ವನಜನಾಭನೆ ನಿನ್ನ ನಾಮಸ್ಮರಣೆ ಮಾಡದೆ ।
ಕಂಡಕಂಡೆಡೆಗೆ ಅಲೆಯುತಲಿದೆ ॥ ೧ ॥

ಸಾದುಸಜ್ಜನರ ಸಂಗವ ಮಾಡಿ ಪರಾಗತಿ ।
ಆದರವನು ಮಾಡಲೊಲ್ಲದು ॥ ೨ ॥

ಕ್ರೋಧ ಕುಹಕ ದುಷ್ಟರೊಡನಾಡಿ ಕಾಲನ ಬಾಧೆಗೆ ।
ಒಳಗಾಗುವಂತೆ ಮಾಡಿದಿರೆನ್ನ ॥ ೩ ॥

ಮದನನಯ್ಯನ ಮರೆದು ಮುಂದುಗಾಣದೆ ।
ಹುದುವಿನೊಳಗೆ ಬಿದ್ದಂತಾದೆನು ॥ ೪ ॥

ಹೃದಯಕಮಲದಿ ನಿಂದು ರಕ್ಷಿಸು ಎನ್ನನಿಂದು ।
ಮೋಕ್ಷ ನೀಡಿ ಹೆಳವನಕಟ್ಟೆ ರಂಗಯ್ಯ ॥ ೫ ॥

## ಇಂಥಾವಗ ಹ್ಯಾಂಗ ಮನಸೋತೆ

ರಾಗ ಭೂಪ ತಾಳ ದೀಪಚಂದಿ

ಇಂಥಾವಗ ಹ್ಯಾಂಗ ಮನಸೋತೆ ಬಹು ಪಂಥವಾಡಿದ ಜಗನ್ಮಾತೆ ॥ ಪಲ್ಲವಿ ॥

ಆವಾಗ ನಾರುವ ಮೈಯ ಬಿಚ್ಚಿ ತೋರಿ ನಲಿಯುವ ಕಾಲು–ಕೈಯ ।
ಕೋರೆಯ ಮಸಿಯುತ ಕೊಸರಿಕೊಂಡಸುರನ ಉದರವ ಬಗೆದಂಥ ।
ಅದ್ಭುತ ಮಹಿಮ ತಾ ॥ ೧ ॥

ಬಡಬ್ರಾಹ್ಮಣನಾಗಿ ತಿರಿದಾ ಅಲ್ಲೆ ಹಡೆದ ತಾಯಿ ಶಿರ ಕಡಿದಾ ।
ಮಡದಿಗಾಗಿ ದೊಡ್ಡ ಅಡವಿಯೊಳ್ ಮನಿ ಕಟ್ಟಿ ಬಿಡದೆ ಗೋಕುಲದೊಳು ।
ಭಕ್ತರ ಪೊರೆದಾತ ॥ ೨ ॥

ಬತ್ತಲೆ ನಿಂತಿದ್ದನಾಗ ತೇಜಿ ಹತ್ತಿ ಮೆರೆಯೋದೊಂದು ಯೋಗ ।
ಉತ್ತಮ ಹೆಳವನಕಟ್ಟೆ ಶ್ರೀರಂಗಯ್ಯ ಭಕ್ತವತ್ಸಲ ಸ್ವಾಮಿ ದೇವ ಕೃಪಾಳು ॥ ೩ ॥

## ಮೂರು ಜಗವ ಕುಣಿಸುವಂಥ ಗಾರುಡಿಗ

ರಾಗ ಬಾಗೇ ಶ್ರೀ      ತಾಳ ದಾದರಾ

ಮೂರು ಜಗವ ಕುಣಿಸುವಂಥ ಗಾರುಡಿಗ ಇಂವ ಯಾರಕ್ಕ ।
ನಾರಾಯಣನಲ್ಲವೇನಃ ನಾರೀ ಕೇಳಃ ತಂಗಿ ॥ ೧ ॥

ದರೆಯ ಸುರಳಿ ಸುತ್ತಿದಂಥ ಅರಸು ಇಂವ ಯಾರಕ್ಕ ।
ಅರಿಯದ ಭಕ್ತರ ಮೊರೆಯನ ಕೇಳ್ದ ವರಾಹ ಕೇಳ್ತಂಗಿ ॥ ೨ ॥

ಕುದುರೆಯನೇರಿ ಎದುರಿಗೆ ಬರುವ ಚದುರೇ ಇಂವ ಯಾರಕ್ಕ ।
ಮಧುರಾಪುರದ ಕದನವ ಹಿಕ್ಕಿದ ಕಲ್ಕ್ಯನು ಕೇಳ್ತಂಗಿ ॥ ೩ ॥

ಇಂದುವದನ ಮೂರ್ತಿ ಗೋವಿಂದ ಇಂವ ಯಾರಕ್ಕ ।
ನಂದನ ಕಂದ ಹೆಳವನಕಟ್ಟೆ ರಂಗ ಕೇಳ್ತಂಗಿ ॥ ೪ ॥

## ನಾರಾಯಣ ನಮ ಈತ

ರಾಗ ಬಾಗೇ ಶ್ರೀ      ತಾಳ ಝುಪ್

ನಾರಾಯಣ ನಮ ಈತ ' ನಾರಿ ಒಳ್ಳೊಳ್ಳೆವರಿಗೆ ಮಾಡಿದೋಖ್ಯಾತಾ ॥ ಪ ॥

ನಾನಾ ಬಗೆಯಿಂದ ಪೊಗಳುವನೀತಾ । ನಾನೆಂಬುವದನ್ನು
ಮುರಿದ ಪ್ರಖ್ಯಾತಾ ॥ ಅ ಪ ॥

ಕೈಕಾಲಿಲ್ಲದೆ ಆಟ ಆಡಿದಾ । ಮೈಯ್ಯಾ್ಕಲೆ ಹೊರೆಯ ಹೊತ್ತು ನೋಡಿದಾ ।
ಕೋರೆಯ ಮಸೆದು ಹದ ಮಾಡಿದಾ । ಕೋಯೆಂದು ಕೂಗಿ ಒದರುತೋಡಿದಾ ॥
ಇವ ಭಕ್ತನ್ನ ಪಾತಾಳಕ್ಕ ದೂಡಿದಾ । ಶಕ್ತಿಮಗನಾದ ಕ್ಷತ್ರಿಯರ ಕಾಡಿದಾ ।
ರಾವಣನಿಗೆ ಅಂಬು ಕಗದು ಹೂಡಿದಾ ।
ರಾಧಾನ್ನನಿ ಪೊಕ್ಕು ಮೋಜು ಮಾಡಿದಾ ॥
ಇವ ದಿಗಂಬರನಾಗಿ ಅಶ್ವನೇರಿ ಓಡಿದಾ ॥ ೧ ॥

ಕಳ್ಳಕಿಂತ ಮಹಾಕಳ್ಳಾ ಕಲ್ಲು ಮಾಡಿಕೊಂಡು ಇರುವನು ನೆಳ್ಳಾ ।
ಭೂಮಿ ನೆಗುವಿ ಸುತ್ತಿ ಬಲ್ಲಾ । ಬುದ್ಧಿವಂತ ಪ್ರಹ್ಲಾದಗೊಲಿದನಲ್ಲಾ ॥
ಇವ ಎರಡು ಪಾದ ಭೂಮಿ ದಾನವಲ್ಲಾ । ಇವನ ಕೊಡಲಿ
ಬಾಯಿಗ್ಯಾರು ಇದರಿಲ್ಲಾ ಲಂಕಿಗೆ ಬೆಂಕಿಯನಲ್ಲಾ ।
ಕೊಂಕಿ ಕೊಳಲನೂದುವನು ಗೊಲ್ಲಾ । ಮೈಮೇಲೆ ಗೇಣು
ಅರಿವಿಲ್ಲಾ । ಇವ ಮಾಮೇರೆಂಬೊ ಈಜಿ ಏರ್‍ಯಾನಲ್ಲಾ ॥ ೨ ॥

ಕಣ್ಣು ಬಿಟ್ಟ ಕಂಡ ವೈರಿ ಕೊಂದಾ । ಕಾಮಾತ್ಮರಿಗೋಗೋದೇನು
ಛಂದಾ । ದಾಡೆಯಿಂದ ದೂಡಿ ಭೂಮಿ ತಂದಾ ।
ದಾಡೆಯಿಂದ ಖಂಬವಡೆದು ಬಂದಾ ॥ ಇವ ಶುಕ್ರನ್ನ ಕಣ್ಣ
ಮುರಿದೊಂದಾ । ತಂದಿಮಾತಿಗೆ ತಾಯಿಮರಣಂದಾ ।
ವನದಿಂಡು ಕೂಡಿ ವನಕ ಕೇಡು ತಂದಾ । ಒಮ್ಮೆ ಮೀಸಲ್ಬೆಣೆ
ಮೆದ್ದೇನಂದಾ । ಇವ ಬತ್ತಲಾಗಿ ಹತ್ತು ಕುದುರಿದುಂದಾ
ತಂದಿ ಹೆಳವನಕಟ್ಟಿ ರಂಗ ಬಂದಾ ॥ ೩ ॥

## ನಂಬಿದೆ ನಂಬಿದೆ ಅಂಬುಜಾಕ್ಷ

ರಾಗ ಕಾಪಿ ತಾಳ ತೀನ್‌ತಾಲ್

ನಂಬಿದೆ ನಂಬಿದೆ ಅಂಬುಜಾಕ್ಷ ನಿನ್ನಾ ।
ನಂಬಿದೆ ನಂಬಿದೆ ನಂಬಿದೆನಯ್ಯಾ ॥ ಪಲ್ಲವಿ ॥

ಮೊರೆಯಿಡೆ ದ್ರೌಪದಿ । ತ್ವರಿತದಿ ಪೋಗುತ ।
ಪೊರೆದ ಮಹಾನುಭಾವ । ಮುರಹರ ನಿನ್ನ ॥ ೧ ॥

ಶಕ್ತನೆ ನಿನ್ನಯ । ಭಕ್ತಿಯಿಂ ಭಜಿಸುವೆ ।
ಭಕ್ತರಿಗೆಲ್ಲಾ ನೀನು । ಮುಕ್ತಿ ಕೊಡುವೆ ಎಂದು ॥ ೨ ॥

ಧರೆಯೊಳು ರಾಜಿಪ । ವರ ಹೆಳವನಕಟ್ಟಿ
ಗಿರಿಯೊಳು ನೆಲೆಸಿಹ । ಪರಮಪುರುಷ ರಂಗಾ ॥ ೩ ॥

# ನಿಗಮಚೋರನ ಕೊಂದು

ರಾಗ ಬೂಪ ತಾಳ ದೀಪಚಂದಿ

ನಿಗಮಚೋರನ ಕೊಂದು ನೀರೊಳು ಮುಳುಗ್ಯಾಡಿ ।
ನಗವ ಬೆನ್ನಿಲಿಪೊತ್ತು ಸುರರಿಗಮೃತವಿತ್ತು ।
ಬಗಿದು ಧಾರುಣಿಯನ್ನು ಹರಹಿ ಹಿರಣ್ಯಕನಾ ।
ಮಿಗಿಲಾದ ಬಲಿಯ ಕೋಟೆ ।

ಸ್ವರ್ಗದಿಂದ ಕಾಮಧೇನುವ ತಂದು ತರಿಸಿದ್ಯಾ ।
ಮಗನಾಗಿ ಹುಟ್ಟಿ ರಕ್ಕಸರನ್ನು ತರಿದೊಟ್ಟಿ ।
ವಿಗಡ ಮಾವನ ಕೊಂದು ಮತ್ತೆ ತ್ರಿಪುರವ ಗೆಲಿದು ।
ಜಗದೊಳುದ್ದಂಡ ಬಾಹುಕನಾದ ದೇವನ ॥ ೧ ॥

ಆದಿಪೊಳಲು ಕ್ಷೀರಾಂಬುಧಿ ಮಥನನಾ ।
ಆದಿ ಕೂರಮನಾಗಿ ಮತ್ತೆ ಹಿರಣ್ಯಕನಾ ।
ಬುಡಿಯಿಂದಲಿ ಸೀಳಿ ಜೋಡು ರೂಪವ ತಾಳಿ ।
ಬೇಡಿ ಮೂರಡಿ ನೆಲನ ತೀಡಿ ಕ್ಷತ್ರಿಯರ ।
ಭಕ್ತರಿಗೆ ಅಭಯವ ನೀಡಿ ಹೆಳವನಕಟ್ಟೆ
ಕಾಡುಕಲ್ಲಲಿ ನಿಂತ ಕಲಿವೆಂಕಟೇಶನ ॥ ೨ ॥

## ೧ ಕೃಷ್ಣ ಕೊರವಂಜಿ

ಪ್ರಾರ್ಥನೆ — ದೇವತಾ ಸ್ತುತಿ

ಶುಕ್ಲಾಂಬರವನುಟ್ಟ ಚಕ್ರದರಗೆ ನಮಿಸಿ
ವಕ್ರಬುದ್ಧಿಯ ತಿದ್ದಿಕೊಂಬೆ ನಾನು ।
ಆದಿ ಗಣನಾಯಕ ಮೋದಕ ಕೊಡುವೆನು
ಸಾಧಿಸಿಕೊಡು ಎನಗೆ ಕವಿತಾವ ।
ವಾಯುಕುಮಾರಗೆ ವಿನಯದಲೊಂದಿಸಿ
ಕಾಯ ಕರಣದಿ ನಮೋ ಎಂಬೆ ।
ಭಾರತೀದೇವಿ ನೀ ಸಾರಥಿಯಾಗಮ್ಮ
ಸೇರುವೆ ಚರಣಕಮಲ ನಿಮ್ಮ ।
ನಂದಿವಾಹನದೇವ ವಂದಿಸುವೆನು ನಿಮಗೆ
ಮುಂದಿನ ನುಡಿಯ ಹೇಳು ।

ಕೊರವಿ

ಕೊರವಿ ಹುಬ್ಬಿನ ಕೂಟ । ಧರೆಗೆ ಚಾಪದ ನೋಟ ।
ಗುಲಗಂಜಿ ಸರಗಳು ಎದೆಯಲಿ ಅಲೆಯುತ
ಮಲಿಗಂಟ ಬಿಗಿದಾಳ ಮಲುಹಾಕಿ ।
ಹೆಬ್ಬಾಗಿಲದೊಳ್ ಹುಬ್ಬುಗಳ ಕುಣಿಸುತ
ಅಬ್ಬರದಿಂದ ಸ್ವರಗೈದಾಳು ।
ಏ ಯವ್ವಾ ಏ ಯಕ್ಕಾ ಏ ಯಮ್ಮಾ ಬಾರೆಂದು
ಸಾರುತ ನಡೆದಾಳ ಕೊರವಂಜಿ ।
ಹೇಳುತ ಕೇಳುತ ಕರತಳನಿಕ್ಕುತ
ಏಳು ಉಪ್ಪರಿಗಿ ಕಂಡಳು ಬ್ಯಾಗ ।

ಕೊರವಿ ಬಂದನೆ

ಅಂಗ ವಂಗವು ಕಾಳಿಂಗ ಕಾಶ್ಮೀರ ದೇಶ
ಹಿಂಗದೆ ತಿರುಗಿ ಬಂದೆನೆ ಧುಂಡಿ ।
ಅಂಜದಿರು ಅಂಜದಿರು ಕಂಜಲೋಚನೀ ಮಂಜು ತಿಳಿದಂತೆ ನಿ—
ನ್ನೆಂಜಿಕೆ ಪರಿಹಾರ ಸಂಜೀವಿನೀ ।

## ೨ ಬ್ರಹ್ಮ ಕೊರವಂಜಿ

### ದೇವತಾಸ್ತುತಿ

ಸುರರು ಕಿನ್ನರರು ಸ್ಮರಣೆ ಮಾಡುವ ಪಾದ ।
ಕುರುಪತಿಯ ಗರುವವನು ಪರಿಹರಿಪ ಪಾದ ।
ಪರಮಯೋಗಿಗಳ ಹೃತ್ಕಮಲದೊಳಿಹ ಪಾದ ।
ಸಿರಿವೆಂಕಟೇಶ್ವರನ ಪಾದಪದ್ಮವನು ನೆನೆವೆ ನಾನು ॥*

ಅರೆದಿಂಗಳಂತೆಸೆವ ಇಟ್ಟ ಕಸ್ತುರಿ ತಿಲಕ ।
ಹೊಳೆವ ಕಿರೀಟ ಮಸ್ತಕದಿ ಶೋಭಿಸುವ ।
ಅರಸಿದರೆ ಮೂಜಗವ ರಕ್ಷಿಸುವ ಕರುಣದಲಿ ।
ಹೆಳವನಕಟ್ಟೆ ಶ್ರೀವೆಂಕಟೇಶ್ವರ ನೆನೆವೆ ನಾನು ॥

ಮಿಸುನಿ ಒಡ್ಯಾಣ ಕಾಂಚಿಯ ದಾಮ ಕೋಲ್ವೆಸಳು ।
ಬಿಸಜನಾಭನ ಬಹುಪರಿಯ ಸೊಬಗಿನಾ ।
ಎಸೆವ ಗದೆ ಶಂಖ ಚಕ್ರವು ಪದ್ಮಕರದಿ ಶೋ— ।
ಭಿಸುತ್ತಿರುವ ಕಂಬುಕಂದರದ ಮೂರುತಿಯ ನೆನೆವೆ ನಾನು ॥

### ಕೊರವಿ

ಗುಂಜಿದಂಡೆಯ ತೋಳು ಭಾಪುರೆ ಹಲ್ಲುಕಚ್ಚಿ ವೀಳ್ಯವು
ಮುಂಜಟೆಯ ಸರ ಹವಳಸರಗಳಾ ಸರವು ಕೊರಳಲಲೆಯುತಾ । ಆದಳೇ ಕೊರವಿ
ಮುತ್ತು ಮಾಣಿಕ ಹೊನ್ನಗೂಡೆಯ ಪಿಡಿದು ।
ಉತ್ತಮ ಶಿಶುವನು ಬೆನ್ನಿಲಿ ಕಟ್ಟಿ ।
ಚಿತ್ತದೊಳಗೆ ನರಹರಿಯ ದ್ಯಾನಿಸುತ ಸತ್ಯಲೋಕದಿಂದಿಳಿದಳೇ ಕೊರವಿ

### ಕೊರವಿಯ ಶಕುನ

ಮಲೆಯಾಳ ಮಾರಾಳ ದೇಶ ಮಾರಾಷ್ಟ್ರ ಗುರ್ಜರ ದೇಶ
ತುಳುವ ಕಳಿಂಗ ಕಾಶ್ಮೀರ ಕರ್ನಾಟ ದೇಶ ।
ಛಪ್ಪನ್ನೈವತ್ತಾರು ದೇಶ ಸುತ್ತಿ ಬಂದೆ
ತಪ್ಪು ಹೇಳುವ ಕೊರವಿ ನಾನಲ್ಲಮ್ಮಾ ।

ವಿನಯದಿ ಸ್ವರಗೈವ ಕೊರವಿಯ ಕಂಡು
ವನಿತೆ ದೇವಕಿ ಸನ್ನೆ ಮಾಡಿ ಕರೆದಳು ।
ಎನ್ನಮ್ಮಾ ಎನ್ನಕ್ಕಾ ಎನ್ನ ತಂದೆಯ ಹೆತ್ತವ್ವಾ
ಎನ್ನ ಕೂಸಿಗೆ ಒಂದಿಷ್ಟನ್ನವನಿಕ್ಕವ್ವಾ ।

ಕರ್ಪೂರ ಗಂಧಿನಿ ಬಾರೇ ಕಾಂತೇ ।
ನಿನ್ನ ಕೈಯ್ಯ ತೋರೇ ।
ಮೊರದ ತುಂಬ ಮುತ್ತು ತಾರೇ ।
ಮಾನಿನಿ ರನ್ನಳೆ ।
ಗುಣಿಸಿ ಮುತ್ತಿನಾಕ್ಷತೆಯಿಟ್ಟು ।
ಗುಪಿತದಿಂದ ಕೇಳೆ ।

ಉರ್ವಿಯೊಳಗೆ ಧಿಟ್ಟನಮ್ಮಾ ಅಮ್ಮಯ್ಯಾ ನಿಮ್ಮ ।
ಗರ್ಭದೊಳಿಹನು ಕಾಣಮ್ಮಾ ।
ಕಂಟಕ ಕಂಸನ ಅಮ್ಮಾ ಇಂವ ಪುಟ್ಟಿ
ಗಂಟಲ ಮುರಿವ ಕಾಣಮ್ಮಾ ।

ಈ ಮಾತು ಹುಸಿಯಲ್ಲ
ಸ್ವಾಮಿಯ ಕರುಣುಂಟು
ಸೀತಾಪತಿಯ ಕರುಣುಂಟು
ನಿನ್ನ ಕಾಮಿತಾರ್ಥವೆಲ್ಲ ಕೈಗೂಡೀತು ಕೇಳೇ ಅಮ್ಮಯ್ಯಾ

ವಚನ

ತಿರುಪತಿ ತಿಮ್ಮಪ್ಪ ತಿರುನಾಮದೊಡೆಯಾ, ಶ್ರೀ ವೀರಭದ್ರಾ
ವಿರೂಪಾಕ್ಷಲಿಂಗಾ, ಲಕ್ಷ್ಮೀರಮಣನ ವರ ಕರುಣದಿಂದ
ಸೊಲ್ಲು ಹೇಳೇನ ಕೇಳ ಇನ್ನೊಂದು ಅಮ್ಮಯ್ಯಾ

ಕೊರವಿಗೆ ದೇವಕಿ ವೀಳ್ಯವನ್ನಿಟ್ಟಳು

ಕೊರವಿ ನಿನ್ನ ಮಾತು ಸತ್ಯವಾದರೆನ್ನ
ದುರಿತವು ಹಿಂಗಿದರೆ ।
ಬಿರುದಿನ ಭಾಪುರೆ ಕೊಡುವೆ ನಿನಗೆಂದು
ಕರದಿ ವೀಳ್ಯವನ್ನಿಟ್ಟಳು ।

## ೩ ಉದ್ದಾಳಿಕನ ಕಥೆ

ದೇವತಾಸ್ತುತಿ

ಕಿರುಡೊಳ್ಳಿಗೆ ಉರಗನ ಸುತ್ತಿದಾತನೆ
ಮೆರೆವ ಪಾಶಾಂಕುಶಧರನೆ ।
ಗಿರಿಜೆಯ ವರಸುತ ಕರಿಮುಖ ಗಣಪನೆ
ಸ್ಥಿರವಾಗಿ ಕೊಡು ಎನಗೆ ಮತಿಯ ॥

ಚಂದ್ರವತಿ ಜನನ—ಬಾಲ್ಯ

ಪಟ್ಟದರಸಿಗೆ ಕುಮಾರನಜಭೂತ
ಹುಟ್ಟಿ ಸಂತೋಷದಿಂದಿರಲು ।
ಘಟ್ಟಿ ಚಿಪ್ಪಿನೊಳಗೆ ಮುತ್ತು ಮೂಡಿದ ತೆರನಂತೆ
ಪುತ್ರಿ ಹುಟ್ಟಲು ಚಂದ್ರವತಿಯು ॥

ಮತ್ತಕ್ಷರಾಭ್ಯಾಸ ಮಾಡಿಸಿ ಮಗಳಿಗೆ
ನರ್ತನಗೀತವ ಕಲಿಸಿ ।
ಉತ್ತಮವಾದ ನಾಟ್ಯ ಕವಿತಾಶಾಸ್ತ್ರವ
ಪುತ್ರಿಗಭ್ಯಾಸವ ಮಾಡಿಸಿ ॥

ಪುತ್ರಿಯ ಸೇವೆಗೆ ಇಟ್ಟನೆ ರಘುಭೂಪ
ಹತ್ತು ಸಾವಿರ ಕೆಳದಿಯರಾ ।
ಸುತ್ತಲು ಪ್ರಾಕಾರ ಬಗೆದಾಪೆ ರಕ್ಷೆಗೆ
ಮುತ್ತಿಟ್ಟನೆ ದ್ವಾರಪಾಲಕರಾ ॥

ಚಂದ್ರವತಿ ವಿವಾಹದ ಯತ್ನ

ಇತ್ತಲಾರಾಯ ಸಂಪತ್ತಿನೊಳಿರುತಿರೆ
ಅತ್ತಲು ಮುನಿ ಕೌಶಿಕರು ।
ಸತ್ಯಲೋಕ ತಪೋಲೋಕವ ಚರಿಸುತ
ಹೊಕ್ಕರು ಯಮಲೋಕವನು ।
ಓತಿನ ಬಾಯ ಮೂಷಿಕದಂತೆ ಮಿಡುಕುತಲಿಪ್ಪ
ಜೀವಿಗಳ ತಾ ಕಂಡ ॥

ಉದ್ದಾಳಿಕನಿಗೆ ಕೌಶಿಕರ ಉಪದೇಶ

ಉತ್ತಮಳಾಗಿರ್ಪ ಸತಿಯನೊಳಗೊಂಡು
ಪುತ್ರಸಂತಾನವ ಪಡೆದು ಕ– ।
ಳತ್ರಯನೊಡಗೊಂಡು ಯಜ್ಞವ ಮಾಡಿದರೆ
ಸತ್ಯ ಅವರಿಗೆ ಸ್ವರ್ಗಲೋಕ ॥

ಬ್ರಹ್ಮನಲ್ಲಿ ಉದ್ದಾಳಿಕನ ಬಿನ್ನಹ

ಬಿಡದೆ ಜರಗಿ ನರೆಪರೆಗಾಳು ಬಂದಾವು
ಸಡಲಿದವು ದಂತಪಂಙ್ತಿ ।
ಕೊಡುವವರಾರು ಕನ್ನಿಕೆಯನು ಮುನಿಪನು
ಜಡಭವನ ಬೆಸಗೊಂಡ ॥

ಜಡಭವ ಸಂದೇಹ ಬೇಡ ಹೋಗೆಂದ

ಉತ್ತಮ ರಘುಕುಲ ರಘುರಾಯನಾತ್ಮ ಜೆ
ಮತ್ತಕಾಸಿನಿ ಇಪ್ಪಳು ಕನ್ನಿಕೆಯಾಗಿ ।
ಪುತ್ರ ಹುಟ್ಟಿದ ಏಳು ವರ್ಷಕೆ ಪತ್ನಿಯು
ದೃಷ್ಟಿಗೋಚರಕೆ ಬೀಳುವಳು ॥

ನಿಂದೆ ಹೊರುವಳು ಆಕೆ ವೃಂದದಲಿಡುವರು
ಕಂದ ಹುಟ್ಟುವ ನಾಸಿಕ ಕೇತು ।
ಅಂದೆ ನಿಂ ಪಿತೃಗಳಿಗೆ ವೈಕುಂಠವಾಹುದು
ಸಂದೇಹ ಬೇಡ ಹೋಗೆಂದ ॥

ಇತ್ತ ಪುತ್ರ ಹುಟ್ಟಿದ

ಮೀರಲಾಗದು ಹರಿಯ ಕುಮಾರನ ಲಿಖಿತವ
ನಾರಿ ತಾನಾಘ್ರಾಣಿಸಿದಳು ।
ಏರಿತು ಉತ್ತಮಾಂಗದಲಿ ಆ ಗರ್ಭವು
ನಾರಿ ನಾಭಿಕಮಲಕೆ ಇಳಿದು ॥

ಜಾತಿ ಸೂತಕವಿಲ್ಲ ಆಶ್ಚರ್ಯ ಮುನಿವರ
ಜಾತ ನಾಸಿಕದಿಂದುದಿಸಿದನು ।

ಭೂತದೊಳಗಿದು ಆಶ್ಚರ್ಯವೆನುತಲೆ
ಕಾಂತೆಯರ್ವಿಸ್ಮಿತರಾದರಲ್ಲಿ ॥

ಚಿತ್ತ ಹಿಗ್ಗಿ ನಲಿದರುದ್ದಾಳಿಕನ
ಹೆತ್ತ ತಾಯಿ ಪಿತಾಮಹರು ।
ಇತ್ತ ಪುತ್ರ ಹುಟ್ಟಿದ ನಮ್ಮ ಕುಲದಲೆನುತಲೆ
ಚಿತ್ತೈಸಿದರ್ ಸ್ವರ್ಗಲೋಕಕೆ ॥

ಸಣ್ಣ ಬೆರಳು ತನ್ನ ಬಾಯೊಳಗಿರಿಸಿದೆ
ಕಣ್ಣ ಮುಚ್ಚುತ ತೆರೆಯುತಲಿ ।
ಹೊನ್ನ ಪುತ್ಥಳಿಯಂತೆ ಥಳಥಳಿಸುವ ಪುಟ್ಟ
ಚಿಣ್ಣನ ತೊಟ್ಟಿಲೊಳು ಕಂಡ ॥

ಬೋರಗುಟ್ಟಿ ಬರುವ ನೀರ ಸೆಳವಿನಲ್ಲಿ
ಹರುಷದಿಂದಿರವೊ ಕಂದ ।
ನೀರಜಭವನ ಕಟ್ಟಳೆ ಮೀರಬಲ್ಲುದೆ
ಸೇರಿತು ಮುನಿಯ ಬಳಿಗೆ ॥

ಓದಿ ತಿದ್ದುವುದು ಸುಜನರು

ವೇದಾಂತವೇದ್ಯ ತತ್ತ್ವಜ್ಞಾನ ಕಥೆಯನು
ವೇದವೇದ್ಯನ ಪಾದ ನೆನೆಸಿ ।
ಮೋದದಿ ಮಾಡಿದೆ ಕಾವ್ಯದೊಳು ಕುಂದಿರೆ
ಓದಿ ತಿದ್ದುವುದು ಸುಜನರು ॥

## ೪. ಲವ-ಕುಶರ ಕಾಳಗ

(ಷಟದ ಸಂಧಿ)

ಇಷ್ಟದೇವತಾ ನಮನ

ಹರಿಹರ ಬ್ರಹ್ಮ ತ್ರಿಮೂರ್ತಿಗಳ ಬಲಗೊಂಬೆ
ಗುರು ಸತ್ಯಬೋದರ ನೆನೆದು ।
ಅಜನ ಪಟ್ಟದರಾಣಿ ಸರಸ್ವತಿ ಬಲಗೊಂಡು
ತೊಡಗುವೆ ರಾಮರ ಕಥೆಯಾ ॥

ಬಣ್ಣದ ಅಕ್ಷತೆ ಸಣ್ಣ ತುಂಬಿ ಪುಷ್ಪ
ಸುವರ್ಣ ದಕ್ಷಿಣೆಯು ತಾಂಬೂಲ ।
ಉಮೆಯ ಪುತ್ರ ಗಣೇಶಗರ್ಪಿಸಿ
ವರ್ಣಿಸುವೆ ಲವ–ಕುಶರ ಕಥೆಯಾ ॥

ಕಥಾ ಪ್ರವೇಶ (ಮುಖ)

ಮಡದಿ ಜಾನಕಿದೇವಿ ಮಕ್ಕಳಿಲ್ಲೆನುತಲಿ
ಮನದಿ ಚಿಂತಿಲಿ ಸೊರಗಿದಳು ।
ಕಂದರಿಲ್ಲದ ಬಾಳು ದುಡುಕೆನುತಲಿ
ಕಂಗಳ ಜಲವ ತುಂಬಿದಳು ॥

ರಾಮ–ಲಕ್ಷ್ಮಣರಿಬ್ಬರು ಬೆರಸಿ ಬ್ಯಾಟಿಯನಾಡುತಿಹರು

ಬಂದರು ಆನಿ ಕುದುರಿ ಮುಂದಿ ದಳವಿಡಿದು
ಬಂದರು ದಳದ ನಾಯಕರು ।
ಬಂದರು ರೈತರು ರಾಣೇರು ಗುರಿಕಾರರು
ನಿಂದಲ್ಲೆ ಫೌಜು ತೋರಿದವು ॥

ಕಾಲ ಗಗ್ಗರಿಯವರು ಕೀಲದುಂಗುರದವರು
ಮ್ಯಾಲೆ ಬಿಲ್ಲ ನಾಯಕರು ।
ದೇವ ರಘುರಾಮರ ಹೊಗಳುವ ಭಟರು
ಬಿನ್ನಾಯದಿಂದೊಪ್ಪುತಿಹರು ॥

ಹಲಸು ನಾರಂಗಾವು ಬೆರಸಿದ ಕಿತ್ತಳೆ
ಅರಿಷಿಣದ ತೋಪು ಎಲಿದೋಟ ।
ಅರಸುಮಕ್ಕಳು ರಾಮಲಕ್ಷ್ಮಣರಿಬ್ಬರು
ಬೆರಸಿ ಬ್ಯಾಟಿಯನಾಡುತಿಹರು ॥

ವರವ ಕೊಟ್ಟಳು ಶ್ರೀಷಟಿಕ

ಅನ್ನವಸ್ತ್ರವನೊಲ್ಲೆ ಹೊನ್ನು ಹಣವನೊಲ್ಲೆ
ನಿನ್ನ ಭಾಗ್ಯವನು ನಾನೊಲ್ಲೆ ।
ಮುನ್ನಿನಸುರನ ರೂಪ ಇನ್ನು ನೀ ಬರೆದರೆ
ಚೆನ್ನಾಗಿ ಹರನ ಗೆಲ್ಲುವೆನು ॥

ಅಂಗುಷ್ಟ ಎಂಬುದಕ ಮುಂದ ಪಾದವ ಬರಿ
ಹಿಂಬಡಕ ಕಾಲು ಛಂದಾದ ನಡ ಧಡ ।
ಹತ್ತು ತಲಿಯವನ ಇಪ್ಪತ್ತು ಕರಗಳು
ಬೆಟ್ಟವ ಕೆದರಿದಂಥ ಕಾಯಕ ।
ಹತ್ತು ಶಿರಗಳಿ ಬರೆದಾಳು ಮುಂದೆರಡು ಪಾದ ಬರೆದಳು
ಒಂದರ ಹಿಂದೊಂದು ವರ್ಣಿಸಿ ಬರೆದಳು ।
ತಂದು ನಿಲ್ಲಿಸಿದಳು ರಾವಣನ
ಚೆಂದವಾಯಿತು ಸೀತೆ ವರವ ಕೊಡೆಂದಳು
ಎಂದೆಂದಿಗೂ ಅಳಿಯದಂತೆ ।
ಉರಿಯೊಳಡಗದು ಶರಧಿಯೊಳಗ ಮುಣುಗದು
ಅಮರವಾಗಿರು ಅಳಿಯದಂತೆ
ಕಿರಿಯ ಲಕ್ಷ್ಮಣದೇವ ಹೊಡೆದರ ಸಾಯೆಂದು
ವರವ ಕೊಟ್ಟಳು ಶ್ರೀಪಟಕ

## ರಾಮನ ಕೋಪ–ಸೀತೆಯ ತಾಪ

ಐಸು ದಿವಸ ಘಾಸಿಯಾಗಿ ಬರೆದಿ ಇವನ
ಐಸುದಿವಸ ಭೋಗಿಸಿದೆ ।
ಮೋಸ ಮಾಡಿದಿ ದೇವಿ ಎನ ಕೂಡ ಹೇಳದೆ
ಘಾಸಿ ಮಾಡಿದಿ ಎನ್ನನೆಂದಾ ।।

ಹೆಂಗಸು ಹೆಡೆತಲಿ ಮೃತ್ಯುವೆಂಬರು ಜನರು
ಇಂದ ಕಂಡೆನು ಸಾದೃಶ್ಯ ।
ಇಂದ ನಾ ಮಲಗುವ ಪಟ್ಟೆ ಮಂಚದ ಮ್ಯಾಲೆ
ಬಿಂಬವ ಬರೆದು ಭೋಗಿಸಿದ್ಯಾ ।।

ಇಂದು ರಾಮರೆ ಕೇಳಿ ಬಂದೊಬ್ಬ ತಾಟಕಿ
ಇಂದು ಮೋಸವ ಮಾಡಿ ನನ್ನ ।
ಇಂದು ಮೋಸವ ಮಾಡಿ ನನ್ನ ಛಂದಾದ ಚಿತ್ರಪಟ ಬರೆದು
ತಂದು ಬಿಟ್ಟಳು ನನ್ನ ಮ್ಯಾಲೆ ।।

ಭೂಮಿದೇವಿ ಮಗಳೆಂದು ನಾ ತಂದೆನು
ನಾಡೊಳಗ ಪತಿವ್ರತೆಯೆಂದು ।

ಪ್ರಾಣವಲ್ಲಭ ನೀನು ಗತಿಯೆಂದು ನಂಬಿದೆ ರಾ-।
ವಣಗ ಮರುಳಾಗ್ಹೋದರಿಯೆ ॥

ಉಭಯತರಿಗೆ ಲಕ್ಷ್ಮಣನ ಸಾಂತ್ವನ

ಕಂಡಕ್ಕೆ ಗೊರಲಿ ಮುಟ್ಟುವುದೇನೆ ಎಲೆ ತಾಯಿ
ಚಂದ್ರಮಗ ರವಿ ಬಿಸಲುಂಟೇ ।
ಮುಂದೇಳು ಲೋಕವ ಸಲಹುವ ಜಗನ್ಮಾತೆಗೆ
ನಿಂದ್ಯದಪಕೀರ್ತಿಂಬೊಂದುದುಂಟೇ ॥

ಸಿಟ್ಟಿನ ವೇಳೆಗೆ ಮೂಗ ಕೊಯ್ದರೆ ಅಣ್ಣಾ
ಶಾಂತ ವೇಳೆಗೆ ಹತ್ತುವದೆ ? ।
ಸೀತೆ ನೆನೆಯುವದ್ಯಾಕ ತಾಪ ಪಡುವದ್ಯಾಕ
ಶೋಕವಿನ್ಯಾತಕೊ ಸ್ವಾಮಿ ? ॥

ಲವ-ಕುಶರಿಗೂ ಶತ್ರುಘ್ನಾದಿಗಳಿಗೂ ನಡೆದ ಸಂಭಾಷಣೆ

ಬಾಲರೆ ನಿಮಗಿಲ್ಲೆ ತಾಯಿ-ತಂದೆಗಳ್ಯಾರು
ಆಳುವ ಒಡೆಯರಿನ್ಯಾರು ।
ತಾಯಿ-ತಂದೆ ನಮ್ಮ ಆಳುವ ಒಡೆಯರ
ಈಗಲೆ ಕೇಳಲೇನಹುದು ।
ಕಾಳಗ ಗೆದ್ದು ನಾ ಕಡೆಗುಳಿದು ನಿಂತರ
ತಾಯಿ-ತಂದೆಗೆ ಹೆಸರು ಕೀರ್ತಿ ।
ಕಾಳಗದ ಗೊಡಿವಿ ನೀವೇನು ಬಲ್ಲಿರೊ ತಮ್ಮ
ತಾಯಿ ಮಕ್ಕಳು ಸುಖದಲ್ಲಿ ।
ಕೇಜಿ ಹಿಡಿದು ನಮ್ಮ ರಾಯರ ಮನಿಯೊಳಗ
ಊಳಿಗ ಮಾಡಿದಿರೆಂದಾ ।
ತಾಯಿ ಆಳಿದ ರಾಜ್ಯವಲ್ಲದೆ ಅದು ಮಾತ್ರ
ಊಳಿಗವೆನಿಸೋದೆ ನಮಗೆ ।
ಗೌಡಿ ಮಾತನೆ ಕೇಳಿ ಮಲತಾಯಿ ಮಕ್ಕಳನೆ
ಕಳುಹಿದಿರಿ ಕಾನನಕೆ ।
ಉತ್ತಮರು ರಾಮ-ಲಕ್ಷ್ಮಣರಾದ ಕಾರಣ
ಮತ್ತೆ ಕೈ ಹಿಡಿದರು ನಿಮ್ಮ ।

ಸೂರ್ಯನ ವರ

ಬಾಲರು ಹಾಕಿದ ಬಾಣ ಶ್ರೀರಾಮರಿಗೆ
ಪಾದಪೂಜೆಯ ಮಾಡಲೆಂದ ।
ರಾಮರು ಹಾಕಿದ ಬಾಣ ಈ ಬಾಲರಿಗೆ
ಹೂವಿನ ಅರಳಾಗಲೆಂದ ।।

ರಂಗಯ್ಯ ಅರುಹಿದಂದಷ್ಟು ಹೇಳಿದೆನು

ಅರಿಯದೆ ಮಾಡಿದೆ ಅಜ್ಞಾನತನದಿಂದ ।
ಬರೆದೋದಿದವಳಲ್ಲ ಮರುಳೆ ।
ಕರುಣಾಕರದೇವ ಹೆಳವನಕಟ್ಟೆ ರಂಗಯ್ಯ
ಅರುಹಿದಂದಷ್ಟು ಹೇಳಿದೆನು ।।

## ೫ ಸೀತಾಕಲ್ಯಾಣ

ಅರಿಷಿಣೆಣ್ಣೆಯ ಮಾಡೋ ಸಂಭ್ರಮ

ಮದುವೆಯ ನಾಲ್ಕು ದಿವಸದಲ್ಲಿ
ಮದುವಣಿಗರು ರಾಮ ಜಾನಕಿಗೆ ।
ಮುದದಿಂದರಿಷಿಣೆಣ್ಣೆಯ ಮಾಡೋ ಸಂಭ್ರಮ
ಪದವ ಹೇಳುವೆ ಸುಜನರು ಕೇಳಿ ।।
ಜಯ ಜಯ ।

ಪೊಂಬಣ್ಣದ ಹಳದಿಯ ಕಲಿಸಿ
ತುಂಬಿದ ಹರಿವಾಣದೊಳಗೆ ।
ಅಂಬುಜನಾಭಗೆ ಅರಿಷಿಣೆಣ್ಣೆಯ ಮಾಡೆ
ಸಂಭ್ರಮದಿಂದ ನಡೆತಂದರಾಗ ।।
ಜಯ ಜಯ ।

ಬ್ರಹ್ಮವಲ್ಲಭೆ ಶಾರದಾದೇವಿ
ವಾಯುರಮಣಿ ಅಂಜನದೇವಿ ।
ಹರುಷದಿ ಕೌಸಲ್ಯೆ ಕೈಕೆ ಸುಮಿತ್ರೇರು
ಅರಿಷಿಣೆಣ್ಣೆಯ ಮಾಡಬಂದರಾಗ ।।
ಜಯ ಜಯ ।

ಅಲ್ಲಲ್ಲಿ ನಡೆವ ನಾಟಕ ಶಾಲೆ
ಬಿಲ್ಲಾಳು ಬೆತ್ತ ಕಾಟೀನವರು ।
ಸೊಲ್ಲು ಸೊಲ್ಲಿಗೆ ಹಿಡಿ ಹೊನ್ನನು ಬೇಗನೆ
ಚೆಲ್ಲುತ ದಶರಥ ನಡೆದ ॥
ಜಯ ಜಯ ।

ಪೊಕ್ಕುಳೊಳಜನ ಪೆತ್ತವ ಕೇಳು
ಅಕ್ರೂರಜನ ಪೆತ್ತವ ಕೇಳು ।
ಮುಕ್ಕಣ್ಣನ ರಿಪುಬಲವ ಸಂಹರಿಸಿದ
ಭಕ್ತವತ್ಸಲ ಹಸೆಗೇಳೆಂದರು ॥

ದಶರಥರಾಜನಂದನ ಕೇಳು
ಅಸುರಸಂಹಾರ ಕಾರಣ ಕೇಳು ।
ವಸುದೆಗೊಡೆಯ ರಾಮ ಹಸೆಗೇಳೆನುತಲಿ
ಋಷಿಗಳೆಲ್ಲರು ಶ್ರುತಿಗರೆದರಾಗ ॥

ಕೂಗಿದವು ಕಾಳೆ

ಮತ್ಸ್ಯಾವತಾರ ಬಂದ ಮಲೆವ ರಕ್ಕಸಾಂತಕ ಬಂದ
ಸೃಷ್ಟಿಯನಾಳುವ ಸ್ವಾಮಿ ಬಂದ ।
ಮತ್ತ ಮಂದರನನ್ನು ಹೊತ್ತು ತಂದ ಕೂರ್ಮನು ಬಂದನೆಂದು
ಹೆಚ್ಚಿನ ಕಾಳೆ ಕೂಗಿದವು ॥

ದಶರಥ ಸುತ ಬಂದ ಅಸುರಸಂಹಾರ ಬಂದ
ಕುಸುಮನಾಭ ಕೃಷ್ಣ ಬಂದ ।
ಶಶಿಮುಖಿಯರಸು ಶ್ರೀಬೋಧ ಬಂದಾನೆಂದು
ಎಸೆವ ಕಾಳೆಗಳು ಕೂಗಿದವು ॥

ಕಲ್ಕ್ಯಾವತಾರ ಬಂದ ಕರುಣಸಾಗರ ಬಂದ
ರಕ್ಷಿಪ ಹರಿ ಬಂದ ।
ಹರದಿ ಜಾನಕಿಯರಸು ಬಂದಾನೆಂದು
ಬಿರುದಿನ ಕಾಳೆ ಕೂಗಿದವು ॥

ತಾಟಕ ಪ್ರಾಣಾಪಹಾರ ಬಂದ ಜಟಾಯು ಮುಕ್ತಿ ಕಾರಣ ಬಂದ
ನಾಟಕಧರ ನಾರಾಯಣ ರವಿ ಕುಲಕೋಟಿ ತಾ ಬಂದನೆಂದೆಸೆದವು ಕಹಳೆ ||
ವೀರ ವಿಕ್ರಮ ರಾಘವ ಬಂದ ಮಾರೀಚಮರ್ದನ ರಾಮ ಬಂದ
ನಾರಿ ಶ್ರೀಜಾನಕಿ ರಮಣಿ ಬಂದನು ಹರಿರಾಮ ತಾ ಬಂದನೆಂದೆಸೆದವು ಕಹಳೆ ||

ನಾಚುತ ಬೇಡಿದಳೆಜನಯ್ಯನ ಸಿರಿಪದವನು

ಕಟ್ಟಿಬಟ್ಟಲೊಳಿರ್ದ ಅರಿಷಿಣ | ಬೊಟ್ಟಲಿ ತೆಗೆದು ಕೌಸಲ್ಯದೇವಿ
ಸೃಷ್ಟಿಗೊಡೆಯ ಶ್ರೀರಾಮಗೆ ಕೊಡೆಂದು | ಕೊಟ್ಟಳೆ ಸಿರಿದೇವಿ ಕೈಲಿ ||

ಗೆಜ್ಜೆಕಾಲಂದುಗೆ ಘಿಳಿರೆನುತಾ | ವಜ್ರಮಾಣಿಕದೋಲೆ ಹೊಳೆಯುತಲಿ |
ಹೆಜ್ಜೆಯಿಂದಳುಕಿ ನಾಚುತ ನಿಂದು | ಬೇಡಿದಳೆಜನಯ್ಯನ ಸಿರಿಪದವನು
ಸರುವ ವೇದ ತತ್ತ್ವದ ಸಾರೆ | ಧರಿಸುತೆ ಜನಕರಾಯನ ತನುಜೆ
ನಿಮ್ಮಯ ಮುಖಕಮಲವ ತಾರೆಂದು | ಅರಿಷಿಣಗಳ ಸಿಗುರಿದ ಸತಿಗೆ ||

ಅಂಬುಜನಾಭ ಶ್ರೀ ರಾಘವಗೆ | ಕುಂಭಿನಿಸುತೆ ಶ್ರೀ ಜಾನಕಿಗೆ |
ನಂಬಿದ ಭಕ್ತರ ಸಲಹೆಂದು ಹರಸುತ | ತಾಂಬೂಲವನಿತ್ತರೈದೆಯರು ||
ತುಂಗ ವಿಕ್ರಮರಾಮ ಜಾನಕಿಯರ | ಮಂಗಳುತ್ಸವರುಟ್ಟಣೆಯ ಪದವಾ ||
ಸಂಗೀತದಿ ಹೇಳಿ ಕೇಳಿದ ಜನರಿಗೆ | ಹೆಳವನಕಟ್ಟೆ ರಂಗಯ್ಯನೊಲಿದಿಹನು ||

## ೬ ಶಂಕರಗಂಡನ ಹಾಡು

(ದೇವತಾಸ್ತುತಿ)

ಕಥಾಮುಖ

ಗಿರಿಜೆಯ ವರಸುತ ಕರಿಮುಖಗೊಂದಿಸಿ |
ಸರಸತಿಗಭಿವಂದಿಸುವೆ |
ಪರಮ ದಯಾಳು ಹೆಳವನಕಟ್ಟೆ ವೆಂಕಟ |
ನಿಮ್ಮನು ನೆನೆಯೋರು ಜನರು ||
ತಾನಾಗಿ ಶಿವಶಂಕರ ಗಂಡ ಕನ್ನಿಕೆ ವಿವಾಹ ಮಾಡೋ ಸಂಭ್ರಮದಿ
ಭಾವಮ್ಮೈದುನರ ಕಥೆಯ ನಾ ಪೇಳುವೆ ನೀವೆಲ್ಲ ಕೇಳಿ ಸಜ್ಜನರು ||

ರತಿವಿವಾಹ

ಗಿಳಿಹಿಂಡು ನವಿಲು ಹಂಸವು ರಂಜಿಸುವಂಥ ।
ನವಿಲ ಮಯೂರ ಪಕ್ಷಿಗಳು ।
ಅಳಿಗಳು ಝೇಂಕರಿಸುತಲಿ ಹಾಡುತಲಿರೆ ।
ನಳಿನನಾಭನ ಓಲಗವು ।।

ಬಲ್ಲವರು ನೀವು ಬಲು ಪರಾಕ್ರಮಿಗಳು ।
ಮಲ್ಲಿಗಿಸರ ಕಬ್ಬು ಬಿಲ್ಲು ।
ಸಲ್ಲದು ನಿಮ್ಮೊಳು ಸಲಿಗೆ ನಮಗೆಂದು ।
ಬಲ್ಲ ಹಿರಿಯರು ಹೇಳುವರು ।।

ಸರ್ವ ಲಕ್ಷಣವುಳ್ಳ ಸರಸಿಜನೇತ್ರೆ ।
ಒಬ್ಬಳೆ ರತಿ ನಮ್ಮ ತಂಗಿ ।
ಹಬ್ಬಹುಣ್ಣಿವೆಯಾದರೆ ಕಳಿಸುವದಾಗಲಿ ।
ನಿರ್ಬಂಧ ಪಡಿಸದಿರಿ ಎಂದ ।।

ಅನುಮಾನ ಮಾಡುವದ್ಯಾಕೊ ನೀ ಇಷ್ಟೊಂದು ।
ಅವಳಿಗೆ ಸ್ವತಂತ್ರಲ್ಲೇನು ।
ನೆನಸಿದಾಗ ನಿಮ್ಮ ಮನೆಗೆ ಕಳಿಸುವೆನೆನಲು ।
ಮನಸಿಜ ನುಡಿದ ದೈನ್ಯದಲಿ ।।

ಸೆಳೆಮಂಚ ಸುಪ್ಪತ್ತಿಗಿ ಗಿಂಡಿ ಬಟ್ಟಲು ।
ತಳಿಗಿ ತಾಬಾಣ ತಂಗಿಗಿತ್ತ
ಸಾಸಿರ ಗೋವುಗಳ ಜವತುರಂಗವ ।
ಬ್ಯಾಸರಿಯದೆ ತಂಗಿಗಿತ್ತ ।
ಲೇಸಾದ ಊರು ಉಂಬಳಿಯ ಕೊಟ್ಟು ರತಿಯ ।
ವಿಳಾಸಪಟ್ಟಣಕ ಕಳಿಸಿದ ।।

ಮನ್ಮಥನ ಅಹಂಕಾರ

ನೋಡೆಲೆ ರತಿದೇವಿ ನಿನ್ನೊಡಹುಟ್ಟಿದಣ್ಣನು ।
ರೂಢಿಯೊಳಗತಿ ಚೆಲುವ ।

ಕೂಡಿ ಗರುವಿಲೆ ಮೆಟ್ಟಿ ಧಮಕಾಗಿ ಬರತಾನ ।
ನೋಡೆಂದು ಸತಿಗೆ ತೋರಿದನು ॥

ಬಡವನಲ್ಲವೊ ಆತ ಬಹು ಪರಾಕ್ರಮಿಯು ।
ಒಡಹುಟ್ಟಿದಣ್ಣ ಮುನಿದರೆ ।
ಕೆಡುವೋದು ನಮ್ಮ ಐಶ್ವರ್ಯ ಆತನ ಗೊಡವಿ ।
ಮುನ್ನ ನಿಮಗ್ಯಾಕ ಎಂದಳು ॥

ಹೂವಿನ ಹಾಸೋ ಮಂಚವು ಪಂಚಭಕ್ಷ್ಯವು ।
ಯಾವಾಗಲೂ ನಮ್ಮ ಮನಿಯು ।
ಭಾಮಿನಿ ಜೋಳದನ್ನವ ಉಣಲಾರಳು ।
ನಾನೇನು ಕಳುಹುವದಿಲ್ಲ ॥

ಬಿಟ್ಟು ಹೋಯಿತು ಮಾರ್ಬಲವು

ಹೊಟ್ಟೆ ಹಸಿದಿತು ಭೋಜನ ಮಾಡೇನೆಂದರೆ ।
ಅಟ್ಟಡಗಿ ಮನೆಯೊಳಗಿಲ್ಲ ।
ಹುಟ್ಟಿದ ಭತ್ತ ಮನೆಯೊಳಗಿಲ್ಲ ।
ಬಿಟ್ಟು ಹೋಯಿತು ಮಾರ್ಬಲವು ॥

## ೭. ಚಂದ್ರಹಾಸನ ಕಥೆ

### ಪೀಠಿಕೆ

ಶ್ರೀರಮಣಿಯ ಮನೋಹರ ಸುಜನ ಮಂ–
ದಾರ ತ್ರೈಭುವನೋದ್ಧಾರ
ಕಾರುಣ್ಯನಿಧಿ ಹೆಳವನಕಟ್ಟೆ ರಂಗಯ್ಯ
ನಾರಾಯಣ ಶರಣೆಂಬೆ ॥ ೧ ॥

ಶೃಂಗಪುರದ ನೆಲವಾಸೆ ಸಜ್ಜನಪೋಷೆ
ಸಂಗೀತಲೋಲೆ ಸುಶೀಲೆ
ಮಂಗಳಗಾತ್ರೆ ಶಾರದೆ ಎನ್ನ ಜಿಹ್ವೆಯಲಿ
ಹಿಂಗದೆ ನೆಲಸೆನ್ನ ತಾಯಿ ॥ ೨ ॥

ನಿತ್ಯಾನಂದ ರಜತಾಚಲವಾಸನೆ
ಭಕ್ತವತ್ಸಲ ಭಾಳನೇತ್ರ
ಹೆತ್ತೂರ ಮನೆದೈವ ಶ್ರೀ ಮೈಲಾರಗೆ
ಹಸ್ತವ ಮುಗಿದು ವಂದಿಸುವೆ ॥ ೩ ॥

ಸುರಪುರವಾಸ ಲಕ್ಷ್ಮಿಯಕಾಂತ ಭಕ್ತರ್ಗೆ
ಬರೆದಂಥ ಜೈಮಿನಿಯೊಳಗೆ
ಪರಮಭಕ್ತ ಚಂದ್ರಹಾಸನ ಕಥೆಯನು
ಚರಿತೆಯ ಮಾಡಿ ವರ್ಣಿಸುವೆ ॥ ೪ ॥

* * * *

## ಪ್ರಥಮ ಸಂಧಿ

ಇಂದ್ರಜ ತುರಗವ ಕಾಣದೆ ಮನದಲ್ಲಿ
ಸಂದೇಹ ಮಾಡುತಿರಲು
ಚಂದ್ರಹಾಸನ ಕಥಾಮೃತ ಸಾರವನು ನಾ—
ರಂದ ಪೇಳಿದ ಫಲಗುಣಗೆ

* * * *

ಬಂದರು ಕೃಷ್ಣಾರ್ಜುನರು ತುರಂಗವ
ಮುಂದೊತ್ತಿ ರಥವ ಬೆಂಬತ್ತಿ
ಚಂದದಿ ದಿಗ್ದೇಶ ತಿರುಗಿದ ಹಯವ ತಾ
ನಿಂದಿರಿಸಿದ ಚಂದ್ರಹಾಸ ॥ ೧ ॥

ಕಟ್ಟಿದನೆರಡು ತುರಂಗದ ಲಿಖಿತವ
ಬಿಟ್ಟೋದಿಕೊಂಡು ನೋಡಿದನು
ವೈಷ್ಣವಕುಲ ಶಿರೋರತ್ನ ಪರಾಕ್ರಮ
ದಿಟ್ಟನಿಗಿದು ನೀತವೆಂದು ॥ ೨ ॥

ಹಿಡಿದುಕೊಂಡು ಬಂದರು ತುರಗವ ಚರರು ತ—
ನ್ನೊಡೆಯಗೆ ಪೇಳಿದರಾಗ
ಹಿಡಿದು ತುರಂಗವ ಕಟ್ಟಿದರಾರೆಂದು
ಕಡು ಚಿಂತೆಯಲಿ ಪಾರ್ಥನಿದ್ದ ॥ ೩ ॥

ಮನದಲಿ ಆಲೋಚನೆಯ ಮಾಡುತಲಿರೆ
ದಿನಕರ ಪ್ರತಿಬಿಂಬದಂತೆ
ವನಜನಾಭ ಕೃಷ್ಣ ಶರಣೆನ್ನುತ ಸುರ
ಮುನಿಯಿಳಿದಂಬರದಿಂದ ॥ ೪ ॥

ಕುಳ್ಳಿರಿಸಿದರು ಗದ್ದಿಗೆಯಿಟ್ಟು ಮುನಿಪಗೆ
ಎಲ್ಲ ವೃತ್ತಾಂತವನರುಹಿ
ಬಲ್ಲಿದ ತುರಗವ ಕಟ್ಟಿದ ದೀರ
ಆವನಾರು ಏನುತ ಕೇಳಿದರು ॥ ೫ ॥

ವ್ಯಾಸಾಂಬರೀಷ ವಿಭೀಷಣಶುಕ್ರ ಪ–
ರಾಶರ ಧ್ರುವ ಪ್ರಹ್ಲಾದ
ಈಸು ಮಂದಿ ಭಕ್ತಗಧಿಕನು ಚಂದ್ರ–
ಹಾಸನೆಂಬಾ ಹರಿಭಕ್ತ ॥ ೬ ॥

ಹೇಳಬೇಕೆನುತ ಮುನೀಶನೆಂದೆಂಬ ಕೇ–
ರಳ ದೇಶದ ರಾಜ್ಯವನು
ಆಳುವ ಪ್ರಭು ಧಾರ್ಮಿಕನೆಂಬಾತನಾ
ಬಾಳನೆಂಬರು ಪ್ರಧಾನಿಯನು ॥ ೭ ॥

ನೀತಿಲಿ ರಾಜ್ಯವನಾಳುತಿರಲು ಕಂದ
ಭೂತ ಮೂಲದಲಿ ಪುಟ್ಟಿದನು
ಜಾತಕರ್ಮ ನಾಮಕರಣ ಮಾಡದೆ ಅವನ
ತಾತ ಕಾಲವಾಗಿ ಪೋದ ॥ ೮ ॥

ನಾಯಕರಿಲ್ಲದ ಕಾಯವಿದೇಕೆಂದು
ಸಾಯಲಾದಳು ರಾಜಪತ್ನಿ
ಮಾಯವಾಯಿತು ಸಿರಿ ಮತ್ತೆ ರಾಜ್ಯವ ಪರ–
ರಾಯರು ಬಂದು ಕಟ್ಟಿದರು ॥ ೯ ॥

ಪೋಷಣೆ ಮಾಡುವರಿಲ್ಲದಿರಲು ಪರ–
ದೇಸಿಯಂದದಿ ಬಾಲನಿರಲು

ದಾಸಿವೊಬ್ಬಳು ಕಂಡು ಮನದಲ್ಲಿ ಮರುಗುತ
ಆ ಶಿಶುವೆತ್ತಿ ನಡೆದಳು ॥ ೧೦ ॥

ತಿರಿದು ಹಾಕುವಳು ಪಾಲ್ಬೆಣ್ಣೆಯ ಶಿಶುವಿಗೆ
ಎರೆದು ಪೋಷಣೆಯ ಮಾಡುವಳು
ತರಳಗೆ ಬೇಕಾದುದಿಲ್ಲದಿರಲು ದಾಸಿ
ಮರುಗುತಿರ್ದಳು ಮನದೊಳಗೆ ॥ ೧೧ ॥

ದೇಶಾಧಿಪತಿಯು ಗರ್ಭದಿ ಬಂದು ನಿನಗೀಗ್ಗ
ಹಾಸುವ ವಸ್ತ್ರಗಳಿಲ್ಲ
ಬೀಸಿ ತೂಗುವರೆ ತೊಟ್ಟಿಲುಯಿಲ್ಲ ಎನುತಲಿ
ಬೇಸತ್ತು ಅಳಲುವಳೊಮ್ಮೆ ॥ ೧೨ ॥

ಇರುತಿರೆ ದಾಸಿ ಅಂತರಿಸಿ ಪೋದಳು ಬಾಲ
ಪರಪುಟ್ಟನಾದುದ ಕಂಡು
ನೆರೆಯ ನಾರಿಯರೆಲ್ಲ ತಮ್ಮ ಮಕ್ಕಳ ಕೊಡೆ
ಎರೆದು ಮಡಿಯ ಪೊದಿಸುವರು ॥ ೧೩ ॥

ಓರಗೆ ಮಕ್ಕಳು ಒಡಗೊಂಡು ಹೋಗಿ ಎ-
ಣ್ಣೋರಿಗೆಯನು ಕೊಡಿಸುವರು
ಕೇರಿ ಕೇರಿಗಳೊಳು ಕೊಡುವರೆಲ್ಲರು
ಕಾರುಣ್ಯದ ಕಂದನಾಗಿ ॥ ೧೪ ॥

ಸೂಳೆವೆಣ್ಣುಗಳೆಲ್ಲ ಸೆಳೆದೆತ್ತಿಕೊಂಡು ತ-
ಮ್ಮಾಲಯದೊಳು ಕರೆದೊಯ್ದು
ಕಾಲ ತೊಳೆದು ಕಸ್ತೂರಿಯನಿಟ್ಟು ಮಲ್ಲಿಗೆ
ಮಾಲೆಯನವಗೆ ಹಾಕುವರು ॥ ೧೫ ॥

ಬಟ್ಟನಿಡಿದು ಬಾಲ ಬರುತಿರೆ ಕಂಡನು
ಪುಟ್ಟ ಶಾಲಿಗ್ರಾಮ ಶಿಲೆಯ
ಘಟ್ಟುಳ್ಳ ಗೋಲಿಯು ತನಗೆ ದೊರಕಿತೆಂದು
ಅಷ್ಟು ಜನರಿಗೆ ತೋರಿಸಿದ ॥ ೧೬ ॥

ಬೆಚ್ಚುವನಪರಿಹರಿಸುವರೆನುತ ಬಹು
ಎಚ್ಚತ್ತು ಪಿಡಿದಾಡುವನು
ಬಚ್ಚಿಡುವರೆ ಮನೆಯಿಲ್ಲದಿರಲು ಬಾಲ
ಅರ್ಚಿಸಿ ಬಾಯೊಳಗಿಡುವ || ೧೭ ||

ಒಂದು ದಿವಸ ಕುಂತಳೇಂದ್ರನ ಮಂತ್ರಿಯು
ಮಂದಿರದಲಿ ವಿಪ್ರರಿಗೆ ಆ—
ನಂದದಿಂದಲಿ ಭೋಜನ ಮಾಡಿಸುವೆನೆಂದ
ಬಂದರು ಬುಧಜನರೆಲ್ಲ || ೧೮ ||

ಮೃಷ್ಟಾನ್ನವನು ಭೋಜನ ಮಾಡಿಸಿ ಸಂ—
ತುಷ್ಟಿಪಡಿಸಿದ ಬ್ರಾಹ್ಮಣರನು
ಪಟ್ಟಸಾಲೆಯೊಳೆಲ್ಲಾ ಹರಡಿ ಗದ್ದುಗೆಯಿಟ್ಟು
ಶ್ರೇಷ್ಠರೆಲ್ಲರ ಕುಳ್ಳಿರಿಸಿ || ೧೯ ||

ದಕ್ಷಿಣೆ ತಾಂಬೂಲವನು ತಕ್ಕೊಂಡು ಮಂ—
ತ್ರಾಕ್ಷತೆಯನು ಮಂತ್ರಿಗಿತ್ತು
ಮಕ್ಕಳೊಡನೆ ಕೂಡಿ ಆಡುವ ತರಳನ
ಲಕ್ಷಣವನ್ನೆ ನೋಡಿದರು || ೨೦ ||

ಅತಿ ಲಕ್ಷಣಸಂಪನ್ನ ಸುಶೀಲನು
ಮತಿವಂತ ಮಹಗುಣ ಧೀರ
ಜತನ ಮಾಡಿರಿ ರಾಜ್ಯಕಿವನೆ ಅಧಿ—
ಪತಿಯೆಂದು ಹೇಳಿದರವರು || ೨೧ ||

ನಾನಲ್ಲದೀ ರಾಜ್ಯಕಧಿಪತಿಯಿಲ್ಲೆಂದು
ಆನಂದಭರಿತನಾಗಿರ್ದ
ತಾನೊಂದು ಕಾರ್ಯವಾಗಿದೆಯೆಂದು ಮಂತ್ರಿಯು
ಧ್ಯಾನಿಸಿದನು ತನ್ನ ಮನದಿ || ೨೨ ||

ನೆರೆದಿರ್ದ ಸಭೆಯೆಲ್ಲ ಹರಿದುಹೋದುದ ಕಂಡು
ಕರುಣವಿಲ್ಲದೆ ದುಷ್ಟಬುದ್ಧಿ

ಕರೆಸಿದ ಪಶುಘಾತಕರ ಕೈಯೊಳಗೆ ಆ
ತರಳನ ಕೊಟ್ಟನಾಕ್ಷಣದಿ ॥ ೩೩ ॥

ಯಾರು ಅರಿಯದಂತೆ ಇವನ ಒಯ್ದು ಘೋ—
ರಾರಣ್ಯದಲಿ ಶಿರವರಿದು
ತೋರಿಸಿ ತನಗೆ ಗುರುತ ತಂದು ಮುಂದಕ್ಕೆ
ಕಾರಣ ಉಂಟೆಂದು ನುಡಿದ ॥ ೩೪ ॥

ಒಡನೆ ಆಡುವ ಮಕ್ಕಳಗಲಿಸಿ ತರಳನ
ಹಿಡಿದು ಹೆಗಲ ಮೇಲೆ ಇಟ್ಟು
ಝಡಿದು ಝುಂಕಿಸಿ ಅಂತ್ಯಜರೆಳೆದೊಯ್ವಾಗ
ನಡುಗುತಿರ್ದನು ಬಾಲಕನು ॥ ೩೫ ॥

ನುಡಿದ ನುಡಿಗೆ ನಾರಾಯಣ ಹರಿ ಎಂಬವನ
ಪಿಡಿದೊಯ್ದು ವೃಂದದೊಳಿಟ್ಟು
ಅಡವಿಯೊಳಗೆ ಅಂಜಿ ಅಳುವ ಬಾಲಕನ ಕಂಡು
ಕಡುಕರ ಮನ ಕರಗಿತು ॥ ೩೬ ॥

ಚಾರುವದನ ಚಿತ್ತವನೆಡಗಾಲೊಳ—
ಗಾರು ಬಿಟ್ಟಿರ್ದುದ ಕಂಡು ಉ—
ಕ್ಷಾರದನ ಮಾಡಿ ತೆಗೆದುಕೊಂಡ್ಹೋಗಿ—
ತೋರಿದರಾ ಮಂತ್ರೀಶ್ವರಗೆ ॥ ೩೭ ॥

ಹಾಲುಸಕ್ಕರೆ ಕುಡಿದನು ಮಂತ್ರಿಯು ಇತ್ತ
ಶ್ರೀಲೋಲನ ಕಿಂಕರನು
ಆಲಿ ಪರ್ವತದ ಅರಣ್ಯದಲ್ಲಿರ್ದನು
ಕಾಲುಗಾಯದ ನೋವಿನಲಿ ॥ ೩೮ ॥

ಆಡುವ ಧ್ವನಿಯು ಆಲಿಸುವ ತುಂಬಿಯು ಅರ—
ಗಿಳಿ ನುಡಿಸುತ್ತಲಿರ್ಪವು
ಎಳೆಪಲ್ಲವವ ತಂದು ಹಾಸುವ ಗರಿಗಳು
ಸುಳಿಗಾಳಿ ಬೀಸುವ ಖಗನು ॥ ೩೯ ॥

ಎಲ್ಲಿಯ ರಭಸವಿದೇನೆಂದು ವನದೇವಿ
ಮೆಲ್ಲಡಿಯಿಡುತ ತಾ ಬಂದು
ಗಲ್ಲವ ಪಿಡಿದು ತೊಡೆಯೊಳಿಟ್ಟು ರಂಬಿಸಿ
ಬಲ್ಲಿದನಾಗೆಂದು ಹರಸಿ ॥ ೩೦ ॥

ಯಾರಾದರೂ ತನ್ನ ನಂಬಿದವರ ಭಾರ
ಭಾರದೊಡೆಯ ಶ್ರೀ ಹರಿಯು
ಊರಿಗಿಂತ ಕಾಡು ಲೇಸಾಯಿತು ಎಂದು ಮು–
ರಾರಿಯು ನೆನೆವ ಕಿಂಕರಗೆ ॥ ೩೧ ॥

ವ್ಯಾಘ್ರ ಕೇಸರಿ ದುಷ್ಟ ಮೃಗದ ಬಾಧೆಯು ಬಹು
ವೆಗ್ಗಳವೆಂದು ಹೇಳಿದರು
ನಿಗ್ರಹ ಮಾಡಬೇಕೆನುತ ಪುಳಿಂದನು
ಶೀಘ್ರದಿಂದಲಿ ತೆರಳಿದನು ॥ ೩೨ ॥

ಹಿಡಿ ಬಿಲ್ಲು ನಡೆ ಮುಂದೆ ಮಕ್ಕಳು ಮಂದಿಯು
ಬಿಡು ನಾಯ ದಿಕ್ಕು ದಿಕ್ಕಿನಲಿ
ತಡೆ ಬಂದ ಮೃಗವನ್ನು ಪೊಡೆ ತಟ್ಟಲೆಸೆವಂತೆ
ಬಿಡದಿರು ಎದೆಯ ಧೈರ್ಯವನು ॥ ೩೩ ॥

ಇದು ಸಿಂಹಗೆರಗಿದ ಹರಿಯ ಮಸ್ತಕದ ಮುತ್ತು
ಉದುರಿದ ಠಾವು ನೋಡಿದಕೊ
ಇದು ಸಾರಂಗ ಮರಿಯ ಹಾಕಿದ ಠಾವು
ಇದು ಹಂದಿ ಕೆದರಿದ ನೆಲವು ॥ ೩೪ ॥

ಹರಿ ತಂದು ಹರಿ ಬೆಂಬತ್ತಿ ಪುಳಿಂದನು
ಹರವರಿಯಿಂದ ಬರುತಿರಲು
ಹರಿಯ ಧ್ಯಾನದಲಿ ಇರುವ ಬಾಲನ ಕಂಡು
ಹರುಷದಿ ಹರಿಯ ನಿಲ್ಲಿಸಿದ ॥ ೩೫ ॥

ಪಾಪಕಳೆಸಿ ಬಂದು ಪೂರ್ವದಲಿ ಪುಣ್ಯ
ರೂಪವ ಕಂಡಂತೆ ಮನದಿ

ಚಾಪವನಿಳುಹಿದ ರಾಯನು ಬೇಗದಿ
ಶ್ರೀಪತಿಗೆ ಶರಣೆಂದೆನುತ ॥ ೩೬ ॥

ಬಡವಗೆ ಭಾಗ್ಯದ ಲಕ್ಷ್ಮಿ ದೊರೆತಂದದಿ
ಎಡಹಿ ನಿದಾನ ಕಂಡಂತೆ
ಪಡೆದೆ ಆಯಾಸವಿಲ್ಲದೆ ಬಾಲಕನನೆಂದು
ಕಡು ಹರುಷವನು ತಾಳಿದನು ॥ ೩೭ ॥

ಸರಸಿಜನಾಭನ ಕೃಪೆಯಿದು ಎನುತಲಿ
ಕರೆಸಿದ ಕಾಲಾಳುಗಳನು
ಅರಸಿ ಮೇಧಾವತಿಗರುಹಿ ಸುದ್ದಿಯನೆಂದು
ಪುರಕಾಗಿ ಚರರನಟ್ಟಿದನು ॥ ೩೮ ॥

ಪುರಕಾಗಿ ಚರರು ಬಂದರು ಈ ವಾರ್ತೆಯ
ನರುಹಿದರಾ ಮೇಧಾವತಿಗೆ
ಕರುಣಿ ಕೃಷ್ಣ ನಿಮಗೆ ಕುಮಾರನನಿತ್ತನು
ಸಿರಿವಂತೆ ಕೇಳು ಬಿನ್ನಪವ ॥ ೩೯ ॥

ಲೇಸಾಯಿತು ಎನ್ನ ದೋಷ ಹಿಂಗಿತು ಎಂದು
ಏಸುಜನ್ಮದ ಪುಣ್ಯ ಫಲವೊ
ಪೂಸಾರನಯ್ಯನ ಕೃಪೆಯಿಂದ ಮಗನಾದ
ವಾಸಿಯಾಯಿತು ಬಾಳ್ವೆ ಎಂದು ॥ ೪೦ ॥

ಕೇರಿ ಕೇರಿಯೊಳೆಲ್ಲ ಸಾರಿ ಡಂಗುರು ಹೊಯ್ಸಿ
ಬೀರಿಸಿದಳು ಸಕ್ಕರೆಯ
ತೋರಣವನೆ ಕಟ್ಟಿ ತವಕದಿಂದಲಿ ಪ್ರಜೆ–
ಪರಿವಾರವೆಲ್ಲ ಕರೆಸಿದಳು ॥ ೪೧ ॥

ಥಳಥಳಿಸುವ ಹೊನ್ನ ತಳಿಗೆ ಆರತಿಗಳ
ಕಳಸ ಕನ್ನಡಿಗಳ ಪಿಡಿದು
ನಳಿನಮುಖಿಯರೊಡಗೊಂಡು ಹರುಷದಿ
ಎಳೆಯ ಬಾಲಕನಿದಿರ್ಗೊಂಡು ॥ ೪೨ ॥

ಕಂದರ್ಪಕೋಟಿಲಾವಣ್ಯದ ತರಳಗೆ
ಚಂದದಾಭರಣವನಿಟ್ಟು
ಚಂದ್ರಹಾಸನೆಂಬೊ ಹೆಸರಿಟ್ಟು ಕರೆದರು ಮು-
ಕುಂದನ ಕರುಣದ ಸುತಗೆ ॥ ೪೩ ॥

ಕತ್ತಲ ಮನೆಗೆ ದೀವಿಗೆಯನಿತ್ತಂತೆ ದೇ-
ವೋತ್ತಮ ಕವಿಗಳಿಗೆ
ಚಿತ್ತಕ್ಕೆ ಚದುರ ನುಡಿಗಳು ದೊರಕಿದ ಹಾಗೆ
ಬತ್ತಿದ ಕೆರೆ ತುಂಬಿದಂತೆ ॥ ೪೪ ॥

ಚಂದನವತಿಯ ಪಟ್ಟಣದ ಪುಳಿಂದನು
ಮಂದಿರದಲಿ ಸ್ಥಿರ ತರದಿ
ಇಂದಿರಾಪತಿ ಹೆಳವನಕಟ್ಟೆ ರಂಗ ಗೋ-
ವಿಂದನ ಭಜಕನೊಪ್ಪಿದನು ॥ ೪೫ ॥

## ದ್ವಿತೀಯ ಸಂಧಿ

ಮಂತ್ರಿ ಮಚ್ಚರವನ್ನು ಮನದೊಳಗಿಟ್ಟು ಶ್ರೀ-
ಕಾಂತನ ಕರುಣವುಳ್ಳವಗೆ
ತಂತ್ರವ ಹೂಡಿ ಕೊಲ್ಲುವೆನೆಂದು ನೇಮಿಸಿ
ಕುಂತಳಪುರಕ್ಕೆ ಕಳುಹಿದನು

* * * *

ಅಕ್ಷರಾಭ್ಯಾಸವ ಮಾಡಬೇಕೆನುತ ಗಂ-
ಧಾಕ್ಷತೆ ಫಲಪುಷ್ಪದಿಂದ
ಸಾಕ್ಷಾತು ಗಣಪತಿಗರ್ಪಿಸಿ ತರಳನ
ಶಿಕ್ಷೆ ಗುರುವಿಗೆ ಒಪ್ಪಿಸಿದ ॥ ೧ ॥

ಓನಾಮವ ಬರೆಯೆಂದರೆ ಬರೆಯದೆ
ಶ್ರೀನಾಥ ಶರಣೆಂದು ಬರೆದ
ನಾನೊಂದು ಹೇಳಲು ನೀನೊಂದು ಬರೆವ ನಿನ್ನ
ಜ್ಞಾನ ಬೇರೆ ಚಿತ್ತ ಬೇರೆ ॥ ೨ ॥

ನೀತಿಲಿ ಬರೆಯೆಂದರೆ ಬರೆಯದೆ ನಿನ್ನ
ಚಾತುರ್ಯದ ಬುದ್ಧಿ ಬೇರೆ
ಈತನ ತೊಡರು ನಮಗೆ ಬೇಡವೆಂದವರ
ತಾತಗೆ ಒಯ್ದು ಒಪ್ಪಿಸಿದ ॥ ೩ ॥

ಧ್ರುವ ಪ್ರಹಲ್ಲಾದ ಅಕ್ರೂರಾಂಬರೀಷ ಮಾ–
ಧವ ಮುರಾರಿಯನ್ನು ಭಜಿಸಿ–
ದವರಿಗಿಂತುತ್ತಮ ಕುಮಾರನು ಇನ್ನು
ಭವಭಯಾದಿಗಳಿಲ್ಲ ನಮಗೆ ॥ ೪ ॥

ಶ್ರೇಷ್ಠರೆಲ್ಲರು ಕೂಡಿ ಶುಭಲಗ್ನವನು ಕಟ್ಟಿ
ಕೊಟ್ಟರು ಕರಲೇಸು ಎನುತ
ಅಷ್ಟವರುಷದ ಕುಮಾರಗೆ ಮುಂಜಿಯ
ಕಟ್ಟಿದರ್ ವೇದೋಕ್ತದಲಿ ॥ ೫ ॥

ವೇದಶಾಸ್ತ್ರ ಧನುರ್ವಿದ್ಯಾ ಸಾಧನೆಗಳ
ಓದಿಸಿದರು ಗುರುಮುಖದಿ
ಮಾಧವನಲ್ಲದೆ ಅನ್ಯತ್ರರಿಲ್ಲವೆಂದು
ಭೇದಾಭೇದವನೆಲ್ಲ ತಿಳಿದು ॥ ೬ ॥

ಪತಿತರಾಗಿಹ ಕುಮಾರರಿಗೆಲ್ಲ ಸ–
ದ್ಗತಿಯಾಗಬೇಕೆಂದೆನುತ
ಹಿತವ ಚಿಂತಿಸಿ ನಂಬಿದವರಿಗೇಕಾದಶಿ
ವ್ರತವ ಮಾಡಿಸಿದನಾಜ್ಞೆಯಲಿ ॥ ೭ ॥

ಎಲ್ಲರು ಏಕಾದಶಿಯ ಜಾಗರ ಮಾಡಿ
ಫುಲ್ಲನಾಭನ ಭಜಿಸುವರು
ಸೊಲ್ಲುಸೊಲ್ಲಿಗೆ ನಾರಾಯಣ ಹರಿಯೆಂಬೋ
ದಲ್ಲದೆ ಪರಗೋಷ್ಠಿಯಿಲ್ಲ ॥ ೮ ॥

ಮಲೆತರವನು ಮುರಿದೊತ್ತಿ ಶಕ್ತಿಯ ಕೊನೆ
ಬೆಳಸುವ ಹರಿಭಕ್ತರೊಡನೆ

ಬಲವಂತ ದರೆಯ ಗೆದ್ದು ಧರಯೊಳು
ಬಹು ಪರಾಕ್ರಮಿಯೆನಿಸಿದನು || ೯ ||

ಲೇಸಾದ ಶುಭಲಗ್ನವ ಕಟ್ಟಿ ಸುತನ ಸಿಂ-
ಹಾಸನದಲ್ಲಿ ಕುಳ್ಳಿರಿಸಿ
ಭೂಸುರ ಬಂಧುಗಳೆಲ್ಲರು ನೆರದಿಂದು-
ಹಾಸಗೆ ಪಟ್ಟಗಟ್ಟಿದರು || ೧೦ ||

ಮಾತೆಪಿತರ ಮಾತುಮಂ ಮೀರಿ ನಡೆಯದೆ ಅ-
ನಾಥರ ಪರಿಪಾಲಿಸುತ್ತ
ಪ್ರೀತಿಯಿಂದಲಿ ದೇವ ಬ್ರಾಹ್ಮಣರೊಡನೆ ರಾಜ್ಯ
ನೀತಿಯಿಂದಾಳುತಲಿಹನು || ೧೧ ||

ಬಾಲಕ ಬಹು ಪರಾಕ್ರಮಿ ಎನ್ನ ಮಾತ ನೀ
ಲಾಲಿಸು ಕುಂತಳೇಶ್ವರಗೆ
ಕಾಲಕಾಲಕೆ ಕಪ್ಪವ ಕೊಟ್ಟು ಬಹವು
ಆಲಸ್ಯವಾಯಿತು ಎಂದ || ೧೨ ||

ಮೀರಬಾರದು ಪಿತನಾಜ್ಞೆಯೆಂದೆನುತ ಉ-
ದಾರ ಬುದ್ಧಿಯಲಿಂದುಹಾಸ
ಯಾರಾರಿಗೆ ಹೋಗಿ ಕೊಡಬೇಕು ಎನುತ ವಿ-
ಚಾರಿಸಿದನು ತನ್ನ ಪಿತನ || ೧೩ ||

ಕುಂತಳ ಪುರದರಸಿಗೆ ದುಷ್ಟಬುದ್ಧಿಯೆಂಬ
ಮಂತ್ರಿ ಜೋಯಿಸ ಪುರೋಹಿತಗೆ
ಕಾಂತೆಗೊಡದ ಕನಕಾಭರಣವೆಲ್ಲವ
ಅಂತಸ್ಥದಿಂದ ಕಟ್ಟಿದನು || ೧೪ ||

ಕರವ ಮುಗಿದು ಇಂದುಹಾಸನಪ್ಪಣೆಯಿಂದ
ತೆರಳಿದರಲ್ಲಿಂದ ಮುಂದೆ
ಭರದಿಂದ ಬಂದು ಬಿಟ್ಟುದು ದಂಡು ಕುಂತಳ
ಪುರದ ಹೆಬ್ಬಾಗಿಲ ಮುಂದೆ || ೧೫ ||

ಪಟ್ಟಣದೊಳು ಬಂದು ಪಾಳಯವನೆ ಬಿಟ್ಟು
ದಿಟ್ಟದಾರೆಂದು ಕೇಳಿದನು
ಕೊಟ್ಟು ಕಪ್ಪವ ಕುಂತಳೇಂದ್ರಗೆ ಕೊಡಿರೆಂದು
ಅಟ್ಟಿದೆನ್ನೊಡೆಯ ಪುಳಿಂದ ॥ ೧೬ ॥

ಎಂದ ಮಾತನು ಕೇಳಿ ಮಂತ್ರಿಗೆ ಪೇಳಲು
ಮುಂದಿರಕಾಗಿ ಕರೆಸಿದ
ಕಂದ ಕಪ್ಪವ ದುಷ್ಟಬುದ್ಧಿಯ ಮುಂದಿಟ್ಟು
ನಿಂದೆದ್ದು ಕರವ ಮುಗಿದರು ॥ ೧೭ ॥

ಕಡೆಗಣ್ಣಲಿ ನೋಡಲಿಲ್ಲವರೊಳು ಮಾತ
ನುಡಿಯದೆ ಸನ್ಮಾನಿಸದೆ
ತಡೆಯೇಕಿಷ್ಟು ದಿವಸವೆಂದು ಮಂತ್ರಿಯು
ಝುಡಿದು ಝುಂಕರಿಸಿ ಕೇಳಿದನು ॥ ೧೮ ॥

ಜೀಯ ಹಸಾದ ನಿಮ್ಮಡಿಗೆ ಇಂದಿನ
ವಾಯಿದ ಕಟ್ಟಿದ ದನವು
ಆಯತವಾಗಿದೆ ಇಳುಹಿಸಿ ನೋಡಿರಿ
ದೇವರು ಕೈಕೊಂಬುದೆನಲು ॥ ೧೯ ॥

ಮಗನ ಕರೆದು ಹೇಳಿದವರಿಗೆ ಭೋಜನ
ಸೊಗಸಾಗಿ ಮಾಡಿಸು ಎಂದ
ಬಗೆಬಗೆಯಿಂದ ತೃಪ್ತ್ಯಾಗಿ ಬಡಿಸು ಎಂದು
ನಗೆ ಮುಖದಿಂದ ಹೇಳಿದನು ॥ ೨೦ ॥

ಅತಿ ದೈನ್ಯದಿಂದ ಹೇಳಿದರು ಏಕಾದಶಿ
ವ್ರತ ನಿರಾಹಾರವು ನಮಗೆ
ಚತುರತನವೇ ನಮ್ಮೊಡನೆ ಕಿರಾತನ
ಮತವಿದು ಎಂದು ಕೇಳಿದನು ॥ ೨೧ ॥

ಹೆಮ್ಮೆನಿಮ್ಮೊಡನೆ ಮಾಡುವದೇತಕೆ ಜೀಯ
ಎಮ್ಮೊಡೆಯನ ಸುಕುಮಾರ

ತಮ್ಮ ರಾಜ್ಯದಲಿ ಏಕಾದಶಿ ವ್ರತ
ನಿರ್ಮಾಣವನ್ನೆ ಮಾಡಿದನು ॥ ೨೨ ॥

ಎಲ್ಲಿಯ ಮಾತಿದು ಆತನ ಸತಿ ಬಂಜೆ ಎಂ–
ದೆಲ್ಲರು ಹೇಳುತಲಿಹರು
ಅಲ್ಲದ ಮಾತಿದು ಅತಿ ಚೋದ್ಯವಾಗಿದೆ
ಎಲ್ಲಿದ್ದ ಆತಗೆ ಸುತನು ॥ ೨೩ ॥

ದುಷ್ಟ ಮೃಗವನೆಚ್ಚು ಕೆಡಹುವೆನೆನುತ ಹಿಂ–
ದಟ್ಟಿ ಹೋದನು ಪುಳಿಂದ
ಪುಟ್ಟ ಬಾಲಕ ನಾರಾಯಣ ಹರಿಯೆನುತ
ಅಟ್ಟಡವಿಯೊಳಗಿರಲು ॥ ೨೪ ॥

ಆ ಶಿಶುವನೆ ತಂದು ಅತಿಶಯದಿಂದಲಿ
ಪೋಷಣೆಯನು ಮಾಡುವರು
ವಾಸುದೇವನ ಕಿಂಕರ ಇಂದುಹಾಸನು
ಭೂಸುರರನೆ ಪಾಲಿಸುವನು ॥ ೨೫ ॥

ಎಂದ ಮಾತನು ಕೇಳಿ ಎದೆಯೊಳಲಗು ನ–
ಟ್ಟಂದದಿ ಮನದೊಳು ಮರುಗಿ
ಅಂದು ಮಾಡಿದ ಕಾರ್ಯ ಆಗಲಿಲ್ಲವು ಸಿದ್ಧ
ಎಂದು ತಾ ಮನದೊಳು ತಿಳಿದ ॥ ೨೬ ॥

ದ್ವಾದಶಿ ದಿವಸ ಪಾರಣೆಯ ಮಾಡಿಸಿ ಅವರಿ
ಗಾದರಿಸಿ ಉಡುಗೊರೆಯಿತ್ತು
ಕ್ರೋಧವ ಮನದೊಳಗಿಟ್ಟು ವೀಳ್ಯವ ಕೊಟ್ಟು
ಖೇದದಿಂದವರ ಕಳುಹಿದನು ॥ ೨೭ ॥

ಕಾವ ಕರುಣಿ ಕೃಷ್ಣರಾಯ ಭಜಕನ ಆ–
ವಾವ ಪರಿಯಲ್ಲಿ ತಂದು
ಜೀವಹತ್ಯವ ಮಾಡಬೇಕೆಂದು ನೇಮಿಸಿ
ಭಾವಿಸಿದನು ತನ್ನ ಮನದಿ ॥ ೨೮ ॥

ತೆರಳಿದ ಮಂತ್ರಯು ಪುಳಿಂದನ ಕುಮಾರನ
ಇರವ ನೋಡೆನು ಎಂದೆನುತ
ಮರಿ ಕೋಗಿಲೆಯಂದದಿ ಮಾತನಾಡುತ
ಸೆರಗು ಪಿಡಿದು ಸುಕುಮಾರಿ ॥ ೨೯ ॥

ಸೆಳೆನಡು ಬಳುಕುತ ತೆಳ್ವಸುರಿನ ನಡು
ಹೊಳೆವ ತನುಕಾಂತಿಯ
ಎಳೆಯುವದನದ ಸುಕುಮಾರಿಯ ರಂಬಿಸಿ
ವಳೆಯಕ್ಕೆ ಕಳುಹಿ ತಾ ತೆರಳ್ದ ॥ ೩೦ ॥

ಅಲ್ಲಲ್ಲಿ ನೋಡುತ ಬಂದನು ಮಂತ್ರಿಯು
ಪಲ್ಲೈಸಿದ ಪೈರುಗಳ
ಬಿಲ್ಲಾಳ ಮುಂದಳಟ್ಟಿಸೆ ಪುಳಿಂದನು
ತಲ್ಲಣಿಸಿದ ತವಕದಲಿ ॥ ೩೧ ॥

ಬೆದುರಿಸಿ ತನ್ನರಮನೆಯೊಳು ಮಂತ್ರಿಗೆ
ಸದರು ಮಾಡಿಸಿದ ಪುಳಿಂದ
ನದರುಗಾಣಿಕೆ ಕಪ್ಪವ ಕೊಟ್ಟು ಮಂತ್ರಿಯ
ಇದಿರುಗೊಂಡರು ಹರುಷದಲಿ ॥ ೩೨ ॥

ಒಂದು ಗದ್ದುಗೆ ಮೇಲೆ ಕುಳ್ಳಿರಿಸಿ ಮಂತ್ರಿಯ
ನಿಂದೆದ್ದು ಕರವ ಮುಗಿದನು
ತಂದು ಕಾಣಿಕೆ ಕಪ್ಪವ ಕೊಟ್ಟು ಪ್ರಧಾನಿಗೆ
ಕಂದನ ತಂದು ತೋರಿಸಿದ ॥ ೩೩ ॥

ತನ್ನಿಂದ ತಾನೆ ಕುಮಾರನಾದನು ಬಹು
ಧನ್ಯ ನೀನಹುದೆಂದೆನುತ
ಗನ್ನಗತಕವನು ಮನದೊಳಗಿಟ್ಟುಕೊಂಡು
ಮನ್ನಿಸಿದನು ಸಭೆಯೊಳಗೆ ॥ ೩೪ ॥

ಕರೆದನು ಚಂದ್ರಹಾಸನ ಕೈಯಲ್ಲಿ
ಒರೆದುಕೊಟ್ಟನು ಮಂತ್ರಿಯೊಡನೆ

ಮರಳಿದ ಯಾರಿಗೆ ತೋರದೆ ಕುಂತಳ
ಪುರಕಾಗಿ ಪೋಗು ನೀ ಎನಲು ॥ ೩೫ ॥

ಬೇಕಾದುದೊಂದು ತುರಂಗವನೇರು
ನಾಲ್ಕು ಮನುಜರೊಡಗೂಡಿ
ಜೋಕೆಯಿಂದಲಿ ಒಯ್ದು ಮದನನ ಕೈಯಲ್ಲಿ
ಏಕಾಂತದಲಿ ಕೊಡು ಎಂದ ॥ ೩೬ ॥

ಮಂತ್ರಿಯಪ್ಪಣೆಯಿಂದ ಮನೆಗೆ ಬಂದನು ಶುದ್ಧ
ಅಂತರಂಗದ ಬಾಲಕನು
ಸಂತೋಷದಿಂದ ತಾಯಿ ತಂದೆಗೆ ಎರಗಿದ
ಯಂತ್ರವಾಹಕನ ಕಿಂಕರನು ॥ ೩೭ ॥

ಮತ್ತೆ ತಾಯಿ–ತಂದೆಗೆರಗಿ ಪೊರಮಟ್ಟು ತೆರಳಿದ
ಚಿತ್ತದಿ ಹರಿಯ ನೆನೆವುತ
ಮಿತ್ರೆಯರೀರ್ವರು ತುಂಬಿದ ಕೊಡಗಳ
ಹೊತ್ತು ಕೊಂಡಿದಿರಿಗೆ ಬರಲು ॥ ೩೮ ॥

ಹಂಗನ ಗರಿಯ ವಾಮದ ಭಾಗ ಜಂಬುಕ
ಮುಂಗುಲಿ ಹರಿಣನ ಕಂಡ
ಶೃಂಗಾರವುಳ್ಳಂಥ ಸ್ತ್ರೀಯರು ಬರುತಿರೆ
ಇದು ಶುಭವೆಂದು ನಡೆದನು ॥ ೩೯ ॥

ಇಂತುಪರಿಯ ಶಕುನವ ಮನ್ನಿಸಿಕೊಂಡು
ಸಂತೋಷದಿಂದ ಬರುತಿರಲು
ಕುಂತಳಪುರದ ಬಾಗಿಲ ಹೊನ್ನ ಕಳಸವ–
ನಂತರವನೆ ಕಂಡ ಇದಿರ ॥ ೪೦ ॥

ಎಸಳುಮಲ್ಲಿಗೆ ಸಂಪಿಗೆ ಶ್ಯಾವಂತಿಗೆ
ಹಸನಾದ ಸುರಗಿ ಪಾದರಿಯು
ಕುಸುಮದ ಪರಿಮಳ ಎಸೆವುತಿರ್ದುದ ಕಂಡು
ಶಶಿಹಾಸ ವನಕೆ ಹಾರೈಸಿ ॥ ೪೧ ॥

ಕಟ್ಟುವನಾಗ ವಾಜಿಯ ತಂಪಲಿ ಬೆ—
ನ್ನಟ್ಟಿ ರಕ್ಷಕರ ಕಾವಲಿಟ್ಟು
ತೊಟ್ಟ ಮೈಜೋಡ ಸಡಿಲಿಸಿ ಕೆಲದ—
ದಲ್ಲಿಟ್ಟು ಸರಸಿಯನು ತಾ ಇಳಿದ || ೪೨ ||

ಮಿಂದು ಮಡಿಯನ್ನುಟ್ಟು ಮರೆಯದೆ ಜಪತಪ
ಸಂಧ್ಯಾವಂದನೆ ಮಾಡಿದನು
ಮಂದಾರ ಮಲ್ಲಿಗೆ ಪುಷ್ಪಗಳಿಂದ ಮು—
ಕುಂದನ ಪೂಜೆ ಮಾಡಿದನು || ೪೩ ||

ಮೀಸಲಾಗಿರ್ದ ಸಿದ್ಧಾನ್ನವ ತೆಗೆದು ಶ್ರೀ—
ವಾಸುದೇವಂಗೆ ಅರ್ಪಿಸಿದ
ಶೇಷವನುಂಡು ಹರುಷದಿಂದಲಿ ಆಗ
ಹೊಸದಾದ ಹೊದಿಕೆಯ ಹೊದ್ದ || ೪೪ ||

ಮೇಲು ಕರ್ಪೂರ ವೀಳ್ಯವ ಸವಿದನು ನಳಿ
ತೋಳ್ಗಳ ತಲೆಗಿಂಬಲಿಟ್ಟು
ಬಳಲಿದ ಸುಖನಿದ್ರೆಗೈದ ಹೆಳವನಕಟ್ಟೆ
ವೆಂಕಟೇಶ್ವರ ಕಿಂಕರನು || ೪೫ ||

## ತೃತೀಯ ಸಂದಿ

ನಿದ್ರೆಗೈದಿಂದುಹಾಸನ ಕಂಚುಳಿಕೆಯ—
ಲ್ಲಿರ್ದ ಪತ್ರವನ್ನೋದಿಕೊಂಡು
ತಿರ್ದಿ ತಾ ವದುವಾದಳು ಮಂತ್ರಿತನುಜೆಯು
ಪದ್ಮನಾಭನ ಕಿಂಕರಗೆ

* * * *

ಲೀಲೆಯಿಂದಲಿ ಚಂಪಕಮಾಲೆ ವಿಷಯೆ ವಿ—
ಶಾಲದಿ ಸಖಿಯರು ಕೂಡಿ
ಆಲಯದಿಂದಲಿ ಹೊರಟರು ವಸಂತ
ಕಾಲ ಬಂದಿರೆ ನಂದನಕೆ || ೧ ||

ಸೊಕ್ಕು ನುಡಿಯೋರು ಸೊಬಗು ಮತಿಯೋರು
ಕಕ್ಕಸ ಕುಚದ ಬಾಲೆಯರು
ನಕ್ಕುನಲಿದು ನಾನಾ ಚೇಷ್ಟೆಗಳಿಂದ
ಹೊಕ್ಕರು ನಂದನವನವ ॥ ೨ ॥

ಗಾಡಿಕಾರ್ತಿಯರೆಲ್ಲ ಗಮಕದಿಂದಲಿ ಒಡ–
ಗೂಡಿ ಸರೋವರವಿಳಿದು
ಮಾಡಿದ ಕೈಚಳಕವ ಜಲಕ್ರೀಡೆಯ–
ನಾಡಿದರತಿ ಹರುಷದಲಿ ॥ ೩ ॥

ಕೋಮಲೆಯರ ನೀರಾಟದ ರಭಸಕ್ಕೆ
ತಾವರೆಗಳು ಬೆರಗಾಗೆ
ಭಾವಕಿಯರ ಮುಖವನೆ ನೋಡಿ ಅಂಬುಜ
ದೇವದಿ ತಲೆಯ ತಗ್ಗಿದವು ॥ ೪ ॥

ಆನಂದಗಾತ್ರೆಯರು ಅತಿ ಹರುಷದಿ ಮಧು-
ಪಾನವ ಮಾಡಿ ಸಂಭ್ರಮದಿ
ದೇನುವ ಕೋಮಲ ಶ್ರವಣನಾಲಿಸುವಂತೆ
ಮಾನಿನಿಯರು ತೆರಳಿದರು ॥ ೫ ॥

ವನಜಮುಖಿಯರು ವನಾಂತರವ ಪೊಕ್ಕು
ಘನರಾಗದಿಂದ ಪಾಡುತಲಿ
ನಮಗೆ ತಮಗೆಯೆಂದು ಕೊಯ್ದರು ತಮತಮ್ಮ
ಮನ ಬಂದ ಫಲಪುಷ್ಪಂಗಳ ॥ ೬ ॥

ಅರಸಿನ ಮಗಳು ಚಂಪಕಮಾಲೆ ಸಖಿಯರು
ಬೆರಸಿ ಕೊಂಡಾಡುತಲಿಹರು
ಮರಸಿ ಮತ್ತೊಂದು ಕಡೆಗೆ ತಾನು ಬಂದಳು
ಹರುಷದಿಂದಲಿ ಮಂತ್ರಿ ತನುಜೆ ॥ ೭ ॥

ಚಿಕ್ಕ ಪ್ರಾಯದ ಕೋಮಲಾಂಗಿಯು ಹೆ–
ಮ್ಮಕ್ಕಳನಗಲಿ ತಾ ಭೂತ–

ವೃಕ್ಷದ ನೆರಳಲ್ಲಿ ಮಲಗಿದ್ದಾತನ ಕಂಡು
ಬೆಕ್ಕಸ ಬೆರಗಾಗಿ ನಿಂದಳು

॥ ೮ ॥

ಪಾರ್ವತಿಪತಿಯೆಂಬೆನೆ ಪಣೆಗಣ್ಣಿಲ್ಲ
ವಾರಿಜೋದ್ಭವನಿವನಲ್ಲ
ನಾರಾಯಣನೆಂಬೆನೆ ಶಂಖಚಕ್ರವು
ತೋರುವುದಿಲ್ಲ ಕೈಯೊಳಗೆ

॥ ೯ ॥

ಸುತ್ತ ನೋಡುವಳಾರ ಸಂಚಾರವಿಲ್ಲೆನುತ
ಹತ್ತಿರೆ ಬಂದು ನಿಲ್ಲುವಳು
ಚಿತ್ತದೊಳೊಮ್ಮೆಮ್ಮೆ ನೆರೆಯ ನೇಮಿಸುವಳು
ಹೊತ್ತಲ್ಲವೆಂದು ಸಾರುವಳು

॥ ೧೦ ॥

ಆದುದಾಗಲಿ ಇವನ ಅಗಲಲಾರೆನು ಲಜ್ಜೆ
ಹೋದರು ಹೋಗಲಿ ಎನುತ
ಪಾದದಿಂದಿಡಿದು ಮಸ್ತಕಪರಿಯಂತರ
ಭೇದಿಸಿ ನೋಡಿದಳವನ

॥ ೧೧ ॥

ಸೊಗಸಿಂದ ನಿದ್ರೆಗೈದಿಂದುಹಾಸನು ತೊಟ್ಟ
ಚೊಗೆಯ ಕುಪ್ಪಸದ ಕೊನೆಯಲ್ಲಿ
ಬಿಗಿದು ಕಟ್ಟಿರ್ದ ಪತ್ರಿಕೆಯನು ಮೆಲ್ಲನೆ
ತೆಗೆದುಕೊಂಡಳು ಮಂತ್ರಿತನುಜೆ

॥ ೧೨ ॥

ನೋಡಿದು ತಮ್ಮ ತಂದೆಯ ಸ್ವಹಸ್ತದ
ಮೋಡಿಯ ಬರೆದ ಬರಹನು
ರೂಢಿಯೊಳತಿ ಚೆಲುವ ಇವನೆಂದು ಕಳುಹಿದ ನಾ
ಮಾಡಿದ ಸುಕೃತದ ಫಲದಿ

॥ ೧೩ ॥

ಶ್ರೀಮುಕು ಮಂತ್ರಿ ದುಷ್ಟಬುದ್ಧಿ ಮದನಗೆ
ನೇಮಿಸಿ ಕಳುಹಿದ ಕಾರ್ಯ
ಸೀಮೆಗರಸು ಇವನಹನು ಕಾಣುತ ಶೀಘ್ರ
ವಿಷವ ಕೊಡುವದುತ್ತಮವು

॥ ೧೪ ॥

ವಿಪ್ಪನ್ನವಾಗಿರ್ದ ವರನ ಕಾಣುತ ನ–
ಮ್ಮಪ್ಪನವರು ಕಳುಹಿದರು
ತಪ್ಪುಂಟು ಇದರೊಳು ಕೆಡುವುದು ಕಾರ್ಯ ಕೈ
ತಪ್ಪೆಂದು ಮನದಲ್ಲಿ ತಿಳಿದು ॥ ೧೫ ॥

ವಾಕಾರವನೆ ಚೆಳ್ಳುಗುರಿಂದಲಿ ತಿದ್ದಿ
ಏಕಾರವನೆ ಮಾಡಿದಳು
ಜೋಕೆಯಿಂದಲಿ ಎಂದಿನಂದದಿ ಕಟ್ಟಿ ವಿರ
ಹಾಕಾತುರದಿಂದ ಮರುಗಿದಳು ॥ ೧೬ ॥

ಹಿಂದಕ್ಕೆ ಹೆಜ್ಜೆಯನಿಡುವರೆ ಕಾಲೇಳವು
ನಿಂದು ನಿಂದೊಮ್ಮೆ ನೋಡುವಳು
ಹೊಂದಿತು ಇಂದುಹಾಸನ ಮೇಲೆ ಚಿತ್ತವು
ಕಂದಿ ಕಾತರಿಸುತಲಿಹಳು ॥ ೧೭ ॥

ಮನವ ಬೇರಿಟ್ಟು ಮಾತಾಡಳೆಲ್ಲರ ಕೂಡೆ
ವಿನಯದಿ ಹುಸಿ ನುಡಿಗಳನು
ಮನ್ಮಥತಾಪದ ಬೆಮರ್ವನಿಗಳಿಂದ
ನೆನೆದವು ಉಟ್ಟ ದೇವಾಂಗ ॥ ೧೮ ॥

ಅರಮನೆ ಹೊಕ್ಕಳು ಮಂತ್ರಿಯ ತನುಜೆ ಉ–
ಪ್ಪರಿಗೆಯನೇರಿ ಮನ್ಮಥನ
ನುರುಹಿನ ಬಾಣದಿಂದಲಿ ಇಂದುಹಾಸನ
ಬರುವ ನೋಡುತ್ತಿರ್ದಳಬಲೆ ॥ ೧೯ ॥

ವೀಣೆಯ ನುಡಿಸಲೊಲ್ಲಳು ಇಂದುಮುಖಿ ಸರ್ಪ–
ವೇಣಿಯರೊಡನೆ ಮಾತಾಡೊ
ಆನಂದದಿಂದಲಿ ಗಾನವ ಮಾಡಳು ಪಂಚ–
ಬಾಣನಮುರುಹು ಘನವಾಗಿ ॥ ೨೦ ॥

ಕುಸುಮಗಂಧಿನಿ ಕಾಮಿಸಿದ ಪುರುಷ ತನ್ನ
ವಶವಾಗಬೇಕು ಎಂದೆನುತ

ಬಸವಳಿವುತಲಿ ಚಿಂತೆಯ ಮಾಡುತಲಿರೆ
ಶಶಿಹಾಸ ನಿದ್ರೆಯ ತಿಳಿದ ॥ ೨೧ ॥

ಮೈ ಮುರಿದೆದ್ದು ಕೊಳನ ತೀರಕೆ ಬಂದು
ಕೈಕಾಲು ಮೋರೆಯ ತೊಳೆದು
ಕೈರಾದ ಗುಳಿಗೆ ಕರ್ಪೂರದ ವೀಳ್ಯವ ಹಾಕಿ
ಹಯವ ಚಪ್ಪರಿಸಿ ಏರಿದನು ॥ ೨೨ ॥

ಸ್ವಾರಿವಂದನು ತಂಡತಂಡದಲಿ
ದ್ವಾರವ ದಾಂಟಿ ನಡೆದನು
ಊರ ಹೊಕ್ಕನು ಗೋಧೂಳಿಯಿಂದಲಿ ಪಡೆ–
ಗಾರರಿಗೆ ಬಂದಿರುವ ॥ ೨೩ ॥

ಕೇಳಿ ಬಲ್ಲಿರೆ ಪುಳಿಂದನ ಸುತ ಕರು–
ಣಾಳು ಶ್ರೀಹರಿಯ ಕಿಂಕರನು
ಆಲಸ್ಯವಾಯಿತು ಬಂದು ಮನ್ನಿಸಿ ಗೋಷ್ಠಿ
ನಾಳೆ ಆದೀತು ಚಿತ್ತೈಸು ॥ ೨೪ ॥

ಆ ಮಾತ ಕೇಳಿದಿರೆದ್ದು ಮದನ ಬಂದು
ಸೋಮಹಾಸನ ತಕ್ಕೈಸಿ
ಕ್ಷೇಮವ ಕೇಳಿ ಗದ್ದುಗೆಯ ತಂದಿರಿಸಿದ
ದಾಮೋದರನ ಕಿಂಕರಗೆ ॥ ೨೫ ॥

ಏಕಾಂತದಲೆನ್ನ ಕರೆದು ನಿಮ್ಮಯ್ಯ ಅ–
ನೇಕ ಪರಿಯಲಿ ಬುದ್ಧಿಗಲಿಸಿ
ಲೋಕವರಿಯದಂತೆ ಈ ಲಿಖಿತವನೊಯ್ದು
ಏಕಾಂತದಲಿ ಕೊಡು ಎಂದ ॥ ೨೬ ॥

ಉಚ್ಚಿ ನೋಡಿದನು ಓಲೆಯನಾಗ ಮಂತ್ರಿಯು
ಉತ್ಸಾಹದೊಸಗೆ ಸಂಭ್ರಮವ
ಅಚ್ಯುತ ಹರಿಯ ಕಿಂಕರ ತಂಗಿಗೆ ವರನೆಂದು
ನಮ್ಮಪ್ಪ ಮೆಚ್ಚಿದನೀ ವರನ ॥ ೨೭ ॥

ಕರಿಸಿದ ಗಣಿತಜ್ಞರಿಗೆ ಗದ್ದುಗೆಯ ತಂ–
ದಿರಿಸಿ ಕುಳ್ಳಿರಿಸಿ ಕೇಳಿದನು
ಬೆರಸಿ ಬಂದಿದೆ ಗಣಕೂಟ ರಾಶಿಗಳೆಂದು
ಅರಿಸಿನಗಳ ತಿವರಿದರು || ೨೮ ||

ಮಂಗಳವಾದ್ಯಗಳೆಸೆದವು ಸಖಿಯರು
ರಂಗವಾಲೆಗಳ ಹಾಕುವರು
ಅಂಗಜಸಖಿಯರು ಇಂದುಹಾಸಗೆಣ್ಣೆಯನೊತ್ತಿ
ಹೊಂಗಳ ಸೀಗೆಯನೆರೆದರು || ೨೯ ||

ನಂಬಿದ ಭಕ್ತಕುಟುಂಬಿ ರಕ್ಷಕನಹು–
ದೆಂಬ ಹೆಳವನಕಟ್ಟೆ ರಂಗ
ಬೆಂಬಿಡದಲಿ ಇಂದುಹಾಸನ ಮದುವೆಗಾ–
ರಂಭಗಳನೆ ಮಾಡಿಸಿದ || ೩೦ ||

## ಚತುರ್ಥ ಸಂಧಿ

ವಿಷಯೆ ಚಂಪಕಮಾಲಿನಿಗೆ ಪುರುಷನಾಗಿ
ಶಶಿಹಾಸ ಕಾಳಿಯನೊಲಿಸಿ
ಅಸುವ ಪಡೆದ ಮಾವ ಭಾವನ ಜಗಕತಿ
ಪೊಸತಾಗಿ ತೋರಿತಾಶ್ಚರ್ಯ

* * * *

ಇಂದುಹಾಸನ ಸಿಂಗರಿಸಿ ಭಾವಕಿಯರು
ಬಂದರು ವಿಷಯೆ ಇದ್ದೆಡೆಗೆ
ಮಂದಗಮನೆ ಮಾತಾಡಲೊಲ್ಲಳು ಲಜ್ಜೆ–
ಯಿಂದತ್ತ ತಲೆಯ ತಗ್ಗುವಳು || ೧ ||

ನಿನ್ನ ಮನೋಭಿಷ್ಟೆ ಆಯಿತವ್ವ ತಾಯಿ
ಪನ್ನಗಧರನ ಕೃಪೆಯಿಂದ
ಇನ್ನೇಕೆ ಮನದ ಸಂಶಯವೆಂದು ಸಖಿಯರು
ಸನ್ಮಾನವನೆ ಮಾಡಿದರು || ೨ ||

ನಾರಿಯರೆಡಬಲದಲಿ ಕರವಿಡಿಯಲು
ಚಾರುವದನೆ ಚಂಚಲಾಕ್ಷಿ
ಆರಡಿಗುರುಳಿನ ಆಲಸದ ಮಣೆಯ ಬಂ–
ದೇರಿದಳೊಜ್ರದಂದಣವ ॥ ೩ ॥

ಇದಿರಲಿ ನಲಿವ ನಾಲುಕು ಸಾಲೆ ಹೆಂಗಳು
ಉದುರು ಬಾಣ ಪುಷ್ಪ ಬಾಣ
ಮಧುರಸ್ವನದಿ ಪಾಡುವ ಭಾಗವತಜನ
ಸದನದಿ ನಡೆತಂದಳಬಲೆ ॥ ೪ ॥

ತಂಡತಂಡದಿ ಕದಳಾರುತಿಯನು ಎತ್ತಿ
ಹೊನ್ನಂದಣವನೆ ಇಳಿಸುವರು
ಕಂದರ್ಪಕನ ಮದಕರಿಯಂತೆ ಒಲಿವುತ
ಬಂದಳು ವಿವಾಹ ಮಂಟಪಕೆ ॥ ೫ ॥

ತೆರೆಯ ಹಚ್ಚಡವನು ಹಿಡಿದು ದಂಪತಿಗಳ
ಪೊರೆಯಲ್ಲಿ ತಂದು ನಿಲ್ಲಿಸಿದರು
ದುರಧೀರ ಇಂದುಹಾಸನ ಕುಲಗೋತ್ರವ
ಅರುಹಬೇಕೆಂದು ಕೇಳಿದರು ॥ ೬ ॥

ಎನ್ನ ಪವಿತ್ರ ಮಹಾಪಿತ ಪರೇಪಿತ ಸಂ–
ಪನ್ನಶಯನ ಶ್ರೀಹರಿಯು
ಎನ್ನದು ವಾಮಗೋತ್ರ ಪುಳಿಂದನು
ಎನ್ನ ಪರಮಗುರುವೆಂದ ॥ ೭ ॥

ಪುರೋಹಿತರು ಕನ್ಯಾರ್ಥವ ಹೇಳಲು
ಸಮಯವು ಲಗ್ನವೆಂದೆನುತ
ಪಿಡಿದ ತಂಡುಲ ಚಂದ್ರಹಾಸನು ಶೀಘ್ರದಿ
ಮಡದಿಯ ಮೇಲೆ ಸೂಸಿದನು ॥ ೮ ॥

ರತ್ನ ಕಂಕಣವನು ಕರದಿ ಧಾಳಿಸುತ
ಶತಪತ್ರನಯನೆ ಸಮುಗಾತ್ರೆ

ಚಿತ್ತದೊಲ್ಲಭನ ಮಸ್ತಕದಿ ತಂಡುಲವ ಚ-
ಮತ್ಕಾರದಿಂದ ಸೂಸಿದಳು ॥ ೯ ॥

ಹೆತ್ತುಪ್ಪ ಕ್ಷೀರದಲಿ ಚಿಟ್ಟನೆ ಹೊಯ್ಸಿದರು
ಮುತ್ತೈದೆಯರೆಲ್ಲ ಅಲಂಕರದಿ
ಹತ್ತು ಸಾವಿರ ಹೊಸಮೊರದ ಬಾಗಿನ ತಂ-
ದಿತ್ತಳು ವಿಷಯ ಸಂಭ್ರಮದಿ ॥ ೧೦ ॥

ತಡವ ಮಾಡದೆ ರಾಣಿ ದೀವಿಗೆಯನು ಹಚ್ಚಿ
ಎಡಮಾಡಿ ಚಪ್ಪರದೊಳಗೆ
ಬಿಡಿ ಮುತ್ತಿನ ಹಸೆಯ ಮೇಲೆ ದಂಪತಿಗಳ
ಒಡನೆ ಭೋಜನಕೆ ಕುಳ್ಳಿರಿಸಿ ॥ ೧೧ ॥

ಕಾಮಿನಿಯರು ಕನಕದ ಹರಿವಾಣದಿ
ಶಾವಿಗೆ ಪರಮಾನ್ನ ಘೃತವ
ಭಾವಕಿಯರು ಮಂಗಳ ಧವಳವ ಪಾಡಿ
ಭೂಮಕ್ಕೆ ಬಡಿಸಿದರಾಗ ॥ ೧೨ ॥

ಭೂಸುರ ಬಂಧುವರ್ಗವನೆಲ್ಲ ನೇಮಿಸಿ
ವಾಸುದೇವ ಕೃಷ್ಣ ಎನುತ
ಹಾಸುಮಂಚದ ಮೇಲೆ ಪವಡಿಸಿದ ಮದನ ವಿ-
ಲಾಸದಿಂದಲಿ ನಿದ್ರೆಗೈದ ॥ ೧೩ ॥

ಅರುಣೋದಯವಾಯಿತು ಹಬ್ಬೇರಿಯು
ಪುರದೊಳಗೆಲ್ಲ ಮೊರೆದವು
ಅರಳಿದವಾಗ ಅಂಬುಜ ಸರೋವರದಲ್ಲಿ
ಮರಿದುಂಬಿಗಳು ಝೇಂಕರಿಸೆ ॥ ೧೪ ॥

ಭಂಡಾರವನೊಂದು ತೃಣವೆಂದು ಭಾವಿಸಿ ತ-
ಕ್ಕೊಂಡು ಧನಲಯವ ಮಾಡಿದನು
ಅಂಡಲದತ್ತ ಪುಳಿಂದನ ಮಂತ್ರಿಯು
ಹಿಂಡಿ ಹಿಪ್ಪೆಯ ಮಾಡಿದನು ॥ ೧೫ ॥

ಬಟ್ಟೆಯೊಳಿರ್ದ ದೇಶಿಗ ನಿನ್ನ ಮಗನೆಂದು
ಪಟ್ಟವ ಕಟ್ಟಿ ನೀನವಗೆ
ಇಟ್ಟ ಆಜ್ಞೆಯಲಿ ದೇವತೆ ಬ್ರಾಹ್ಮರಿಗೆ ನೀ-
ನಷ್ಟ ಮಾಡಿದೆ ದ್ರವ್ಯವನು || ೧೬ ||

ಕಡುಗೋಪದಿಂದ ಪುಳಿಂದನ ಮಂತ್ರಿಯು
ಮಡದಿ–ಮಕ್ಕಳ ಸೆರೆಯಿಟ್ಟು
ಝಡಿದು ಝೋಂಕರಿಸಿ ಕಾಲಿಗೆ ನಿಗಳನು ಹಾಕಿ
ನಡೆತಂದ ಕುಂತಳಪುರಕೆ || ೧೭ ||

ಅರಿತಿಂದುಹಾಸಗೆ ವಿಷವನುಣಿಸಿಧನೊ
ಮರೆತನೊ ಮದನ ಎಂದೆನುತ
ಕರಶೋಲಿಯೇನೊ ಎನುತ ಚಿಂತೆ ಮಾಡುತ
ಬರುತ ಭುಜಂಗನ ಕಂಡ || ೧೮ ||

ಅನುದಿನ ನಿನ್ನ ಭಂಡಾರವ ಕಾಯ್ದಿರ್ದೆ
ನಿನ್ನ ಮಗ ಲಯವ ಮಾಡಿದನು
ಎನಗೇಕೆಯೆಂದು ಭೂಬಲ ಹೊಕ್ಕನು
ಮನುಜರಂದದಿ ಮಾತನಾಡಿ || ೧೯ ||

ಬೆರಗಾಗಿ ಏನು ಕಾರಣ ಕುಂತಳ
ಪುರಕಾಗಿ ತಾನು ಬರುತಿರಲು
ಪರಿಪರಿಯಲಿ ವಾದ್ಯರಭಸವ ಕಂಡನು
ಕರೆದು ಕೇಳಿದನು ಬೇಗವರ || ೨೦ ||

ಮದನನ ತಂಗಿ ವಿಷಯೆ ಇಂದುಹಾಸನ
ಮದುವೆಯ ಸಂಭ್ರಮವೆನಲು
ಎದೆಯೊಳು ಅಲಗು ನೆಟ್ಟಂದದಿ ಮಂತ್ರಿಯು
ಬೆದರಿ ಅಂದಣವನು ಇಳಿದ || ೨೧ ||

ತಂದೆಯು ಅಂದಣಕಿದಿರಾಗಿ ಮದನನು
ಬಂದು ಚರಣಕ್ಕೆರಗಿದನು

ನಿಂದಿರಬೇಡ ಎನ್ನಿದಿರಲಿ ಹೋಗು ಹೋ—
ಗೆಂದು ಧಿಕ್ಕರಿಸಿದ ಮಗನ ॥ ೨೨ ॥

ಅಪರಾದವೇನು ಎನಗೆ ನೀವು ಕಳುಹಿದ
ಗುಪಿತದಲಿ ಲಿಖಿತವ ನೋಡಿ
ಚಪಲಾಂಬಿಕೆಯ ಇಂದುಹಾಸನಿಗಿತ್ತೆನಿಂತಾ
ವಿಪರೀತವಹುದನರಿಯೆ

ಊಳಿಗದವರಟ್ಟಿ ಕರೆಸಿದನಾಗ ಚಾಂ—
ಡಾಲರಿಗರುಹಿ ಬೇಗದಲಿ
ಕಾಳಿಯ ಗುಡಿಯಲಿ ಖಡ್ಗದಾರಿಗಳಾಗಿ
ಪಾಳತಿಯನು ನೋಡಿಕೊಂಡು ॥ ೨೪ ॥

ಅಂದಿನಂದದಿ ಛನ್ನೊಳೊಂಚನೆ ಮಾಡದೆ
ಬಂದವರಾರಾದರವರ
ಸಂದೇಹವಿಲ್ಲದೆ ಪ್ರಾಣವನಳಿವುದು
ಬಂದು ನಮಗೆ ಹೇಳುವುದು ॥ ೨೫ ॥

ಇಂದುಹಾಸಗೆ ಮಡಿಯನುಡಿಸಿ ಏಕಾಂಗದಿ
ಗಂದ—ಫಲ—ಪುಷ್ಪಾದಿಗಳ
ಕುಂದಣದ ಹರಿವಾಣದೊಳಗೆ ಮೀಸಲನಿಟ್ಟು
ಮಂದಿರದಿಂದಲಟ್ಟಿದನು ॥ ೨೬ ॥

ಆ ಪುರದರಸು ದರ್ಪಣವ ನೋಡಲು ತನ್ನ
ರೂಪಿನೊಳಗೆ ಮಸ್ತಕವು
ಲೋಪವಾಗಿರಲಿದುಯೇನು ಕಾರಣವೆಂದು
ಭೂಪ ಕೇಳಿದ ನಾಗರಿಕರ ॥ ೨೭ ॥

ಮೃತ್ಯುವಿಗಿದು ಕಾರಣವೆಂದು ಪೇಳಲು
ಪೃಥ್ವಿಹೀನನಾದೆ ಎನುತ
ಪೃಥ್ವಿಯನಿತ್ತು ಮಗಳ ಧಾರೆಯೆರೆವೆನು
ಮತ್ತಾವ ದೊರೆಗಹುದೆಂದ ॥ ೨೮ ॥

ಮದನನ ಕರೆದು ಹೇಳಿದ ಇಂದುಹಾಸನ
ಒದಗಲಿ ಕರೆತಾರೆನಲು
ಕುದುರೆಯನೇರಿ ಮಂದಿರಕಾಗಿ ಬರುತಿರೆ
ಇದಿರಲಿ ಕಂಡ ಮೈದುನನ || ೨೯ ||

ಪಟ್ಟಣದರಸು ಕರೆಸಿದ ನೀ ಹೋಗು ನಾ
ಕೊಟ್ಟುಬಹೆನು ನೈವೇದ್ಯವನು
ತೊಟ್ಟ ಹೊದಿಕೆಯ ಇಂದುಹಾಸಗೆ ತೊಡಿಸಿದ
ಉಟ್ಟನು ಅಂಗವಸ್ತ್ರವನು || ೩೦ ||

ಹತ್ತಿ ತುರಂಗವನೇರಿಂದುಹಾಸನು
ಅತ್ತ ನಡೆದನರಮನೆಗೆ
ಇತ್ತ ನಡೆದು ಮದನನು ನೈವೇದ್ಯವನು
ಹೊತ್ತು ಬಂದನು ಅಂಬಿಕಾಲಯಕೆ || ೩೧ ||

ಎಡಹಿದ ಹೊನ್ನ ಹೊಸ್ತಿಲ ಹರಿವಾಣವ
ಹಿಡಿಯಲಾರದೆ ಬಿಟ್ಟು ನೆಲಕೆ
ಹೊಡೆದರು ಕೆಡಹಿದರು ಮದನ[illegible]
ಬಿಡೆ ಕೊಟ್ಟು ಬಂದರಲ್ಲಿಂದ || ೩೨ ||

ಗಾಲ್ಪನಪ್ಪಣೆಯಿಂದ ಭೂಪಾಲನು
ಆಲಸ್ಯವಿಲ್ಲದೆ ಶೀಘ್ರದಲಿ
ಕಾಲ ತೊಳೆದು ಕನ್ಯಾದಾನವ ಮಾಡಿಧ
ಶ್ರೀಲೋಲನಾಪ್ತ ಕಿಂಕರಗೆ || ೩೩ ||

ಗಾಂಧರ್ವವಿವಾಹವ ಮಾಡಿದರಾಗಲೆ
ಒಂದು ನಿಮಿಷ ಮಾತ್ರದಲಿ
ಇಂದುಹಾಸುಗೆ ಪಟ್ಟಗಟ್ಟಿ ಸುಖದಿ ಬಾ–
ಳೆಂದಾಶೀರ್ವಾದವ ಕೊಟ್ಟು || ೩೪ ||

ಗಾಲ್ವನಪ್ಪಣೆಯ ಭೂಪಾಲ ಕೇಳಲು ಬೇಗ
ನಾದಂಗನೆ ಸಹಿತವಾಗಿ

ಭೋಗೇಂದ್ರ ಹೆಡೆ ಕಳಚಿದಂತೆ ದುಃಖ ಸಂ—
ಸಾಗರವನ್ನೆ ದಾಂಟಿದರು ॥ ೪೫ ॥

ಸಡಗರದಿಂದಲಿ ಸೊಂಡಿಲವನೆ ಏರಿ
ಮಡದಿ ಚಂಪಕಮಾಲೆ ಸಹಿತ
ಗಿಡಿಬಿಡಿ ತಂಬಟು ಪಂಚವಾದ್ಯಗಳಿಂದ
ನಡೆತಂದ ಮಾವನ ಮನೆಗೆ ॥ ೪೬ ॥

ಭಾವದಿಂದಲಿ ಮದ್ದಾನೆಯನಿಳಿದನು
ಮಾವನ ಚರಣಕ್ಕೆ ಎರಗಿ
ಯಾವ ಕಾರ್ಯವ ಮಾಡು ಎಂದರೆ ಮತ್ತೆ ನೀ—
ನಾವ ಕಾರ್ಯವ ಮಾಡಿದೆಂದ ॥ ೪೭ ॥

ಅವನೀಪತಿಯು ಕರೆಸಿದ ನೀ ಹೋಗು ನಾ—
ಗವುರಿ ಪೂಜೆಗೆ ಹೋಹೆನೆನುತ
ಗಮನಿಸಿದನು ನಿನ್ನ ಮಗನೆಂದು ಮಂತ್ರಿಗೆ
ವಿವರದಿಂದಲಿ ಹೇಳಿದನು ॥ ೪೮ ॥

ಎಂದ ಮಾತನು ಕೇಳಿ ಎದೆಯು ಜರ್ಜರಿತವಾಗಿ
ಒಂದು ನಿಮಿಷ ಮೈಮರೆದ
ಬಂದವರ ಮನ್ನಿಸಲಿಲ್ಲವು ಬಹು ಚಿಂತೆ
ಯಿಂದಾತ ದರೆಗೊರಗಿದನು ॥ ೪೯ ॥

ಕಾರುಗತ್ತಲೆ ಕವಿದವು ಎಡವುತ್ತ
ಏಳುತ್ತ ನೆಲಕೆ ಬೀಳುತಲಿ
ಸುಡುಗಾಡಲಿ ಬೇವ ಹೆಣನ ಕೊಳ್ಳಿಯ ಪಿಡಿದು
ಅಡಿಯಿಟ್ಟನು ಅತ್ತ ಮಂತ್ರಿ ॥ ೫೦ ॥

ಈತನಾರು ತಮ್ಮ ಹಿಂದಿನೊಳಗೆ ಇಂತ
ಪಾತಕವಿಲ್ಲವೆಂದೆನುತ
ಭೂತಜನಂಗಳೆಲ್ಲವು ಕೂಡಿ ತಮ್ಮೊಳು
ಮಾತನಾಡುತಲಿರ್ದವು ॥ ೫೧ ॥

ತೆಗೆದು ಬಾಗಿಲ ಚಾಮುಂಡಿಗುಡಿವೊಳಗೆ ಹೊಕ್ಕ
ಮಗನ ನೋಡುವೆನೆಂಬ ಭರದಿ
ಬಿಗಿದ ಹುಬ್ಬುಗಳು ಬಿಟ್ಟ ಕಂಗಳು ಗಾತ್ರ
ಆಗಲಿದ ಶಿರಸವ ಕಂಡು || ೪೨ ||

ಕೂಡಿಸಿದನು ಶಿರಸವ ತಂದು ಮುಂಡಕ್ಕೆ
ನೀಡಿದ ಪಣೆಯೊಳು ಪಣೆಯ
ಪಾಡುತ್ತ ಶೋಕವ ಮಾಡುತ ಮಂತ್ರಿಯು
ಕೋಡಿವರಿದ ರಕ್ತದೊಳು ಹೊರಳಿ || ೪೩ ||

ಹಂಬಲಿಸಿದನು ಹಲವು ತಾಪದಲಿ
ತಂಬಿಸಲಾರೆ ತಾಪವನು
ಕಂಬಕಂಬವ ಹಾಯ್ದು ಒಡೆದಿತು ಮಸ್ತಕ
ಕುಂಬಳಕಾಯಿ ಬಿರಿದಂತೆ || ೪೪ ||

ಮಿಸುನಿಯ ಹರಿವಾಣದಲಿ ಪೂಜಾರಿಯು
ಹೊಸ ಹುವ್ವ ಗಂಧವ ಪಿಡಿದು
ಶಶಿಧರನರಸಿಯ ಗುಡಿಯ ಹೊಕ್ಕು ಕಂಡನು
ಅಸುವಳಿದಿಹರಿಬ್ಬರನು || ೪೫ ||

ಭರದಿಂದ ಬಂದು ಪೂಜಾರಿಂದುಹಾಸಗೆ
ಅರುಹಿದನಾಗಲೆ ನಿಮ್ಮ
ಹಿರಿಯ ಮಾವ ಭಾವ ಕಾಳಿಯ ಗುಡಿಯೊಳು
ಶಿರವರಿದು ಧರೆಗೊರಗಿದರು || ೪೬ ||

ಮಡಿದರೆಂಬುದ ಕೇಳಿ ಶಶಿಹಾಸ ತಾನು
ನಡೆಗಾಲಿನಿಂದಲಿ ಬಂದು
ಗುಡಿಯೊಳು ಹೊಕ್ಕು ಕಂಡನು ಅವರಿಬ್ಬರು
ಕಡಿಖಂಡವಾಗಿ ಬಿದ್ದಿಹರ || ೪೭ ||

ವಾರ್ತೆಗಳಾದವು ದಿಕ್ಕುದಿಕ್ಕಿಗೆ ಅಪ–
ಕೀರ್ತಿಗಳಾದವು ನಮಗೆ

ಕಾತ್ಯಾಯಿನಿಗೆ ಪ್ರಾಣವನೊಪ್ಪಿಸುವೆನೆಂದು
ನಿರ್ತದಿಂದಲಿ ಶಪಥವಿಡಿದ ॥ ೪೮ ॥

ಹರಿಹರಿದಿಟ್ಟನು ಮಾಂಸಭಕ್ಷಣೆ ಮಾಡೆ
ಉರಿದನು ಉನ್ನತ ದೀಪಕವನ
ಶಿರಸವ ಪೂರ್ಣಾಹುತಿಯ ಮಾಡುವೆನೆಂದು
ಕರವ ಚಾಚಿದನು ಮಸ್ತಕಕೆ ॥ ೪೯ ॥

ಮೆಚ್ಚಿದೆ ಬೇಡು ಬೇಡೆನುತ ಮಹಾದೇವಿ
ಚಚ್ಚರದಿಂದಲಿ ಬಂದು
ಉಚ್ಚಿದ ಅಲಗ ಸೆಳೆದುಕೊಂಡು ಹಸುಮಗನ ನೀ—
ನ್ನಿಚ್ಚೆ ಬಂದೊರವ ಬೇಡೆಂದು ॥ ೫೦ ॥

ಹಡೆದ ತಾಯಿ ನೀನಿವರ ಪ್ರಾಣವನುಳುಹು ನಾ
ಮಾಡಿದ ಬಿನ್ನಹ ಕೇಳು
ಕಡುಪಾತಕ ದುಷ್ಟಬುದ್ಧಿಯ ಗೊಡವೆ
ಬೇಡ ನಿನಗೆರಡು ವರವ ಕೊಡುವೆ ॥ ೫೧ ॥

ಬಹಳ ಭಂಗವ ಬಡಿಸಿದನು ನಿನ್ನ
ಖೂಳನು ಕಡುಪಾತಕಿಯು
ತಾಳಲಾರದೆ ಭೂಮಿ ಭಾರವನಿಳುಹಿದೆ ಕರು—
ಣಾಳು ನೀ ಪ್ರಾಣವ ಪಡೆದೆ ॥ ೫೨ ॥

ಆ ಮಂತ್ರ ಜಪಿಸಲು ಜೀವ ಪಸರಿಸಿತು
ತಾಮಸ ತಿಳಿದು ಎಚ್ಚೆತ್ತು
ಕೋಮಲಗಾತ್ರವಾಯಿತು ತಂದೆ—ಮಕ್ಕಳು
ಪ್ರೇಮದಿಂದೆದ್ದು ಕುಳಿತರು ॥ ೫೩ ॥

ಕಾವ ಕೊಲ್ಲುವ ಶ್ರೀಹರಿಯಲ್ಲದೆ
ಭೂವಲಯದೊಳು ಬೇರುಂಟೆ
ನೀವಿದ ಮನದ ಸಂಕಲ್ಪವ ಬಿಡಿ ಎಂದು
ಮಾವನ ಸನ್ಮತಿಸಿದನು ॥ ೫೪ ॥

ಚಂದನವತಿಯಲಿ ಸೆರೆಯನಿಟ್ಟವರ ಹೊ–
ನ್ನಂದಣ ಕೊಟ್ಟು ಕಳೆಸಿದ
ತಂದೆ–ತಾಯಿಬ್ಬರ ಚರಣಕ್ಕೆ ಎರಗಿದ
ಇಂದುಹಾಸನ ಹರಸಿದರು ॥ ೫೫ ॥

ಪದ್ಮಾಕ್ಷನು ಹಿರಿಯರಸಿ ಮಗ ಮಕ–
ರಧ್ವಜ ಕಿರಿಯಾಕೆ ಮಗನು
ಅದ್ವೈತವಾಗಿ ರಾಜ್ಯವನಾಳುತ ಪ್ರ–
ಸಿದ್ಧವಾಗಿಹ ಇಂದುಹಾಸ ॥ ೫೬ ॥

ಉನ್ನತವಾದ ಶಾಲಿಗ್ರಾಮ ಶಿಲೆಯು ಪ್ರ–
ಸನ್ನವಾಗಿರ್ದ ಕಾರಣದಿ
ಮುನ್ನೂರು ವರುಷವು ಅವನಿಯನಾಳುವ ಪ್ರ–
ಸಿದ್ಧವಾಗಿಹ ಇಂದುಹಾಸ ॥ ೫೭ ॥

ನಾಶವಹುದು ಋಣ ರೋಗ ದಾರಿದ್ರ್ಯವು
ಕ್ಲೇಶ ಸಂಕಟ ಪರಿಹಾರವು
ಬೇಸರಿಲ್ಲದೆ ನಿನ್ನ ದಾಸನ ಕಥೆಯನು
ಚರಿತೆಯ ಮಾಡಿ ವರ್ಣಿಸಿದೆ ॥ ೫೮ ॥

ಇಂದುಹಾಸನ ಕಥೆಯನು ಬರೆದು ಕೇಳ್ವರ್ಗೆ
ಬಂದ ಕಂಟಕವು ಪರಿಹರವು
ಎಂದೆಂದಿಗೆ ಹರಿಭಕ್ತಿ ದೊರಕುವುದು
ಮುಂದಕ್ಕೆ ಮುಕ್ತಿ ಸಾಧನವು ॥ ೫೯ ॥

ಅರಿಯೆನು ಕವಿತಾಚಾತುರ್ಯದ ಮಹಿಮೆಯ
ಗುರುಮುಖದಲ್ಲಿ ಕೇಳಲಿಲ್ಲ
ಪರಮದಯಾಳು ಹೆಳವನಕಟ್ಟೆ ರಂಗಯ್ಯ
ವರವಿತ್ತು ಸಲಹೊ ಅನುದಿನವು ॥ ೬೦ ॥

*

# ಟಿಪ್ಪಣಿ

**ಅಂಬರೀಷ** ಸೂರ್ಯವಂಶದ ವೈವಸ್ವತ ಮನುವಿನ ಮಗನಾದ ನಾಬಾಗನ ಮಗ ದಾನಶೂರನೂ ಬಗವದ್ಭಕ್ತನೂ ಆಗಿದ್ದ, ವಿಷ್ಣುಬಕ್ತಾಗ್ರೇಸರ

**ಅಕ್ರೂರ** ಯದುಕುಲದ ಶ್ವಫಲ್ಕ ಮತ್ತು ಗಾಧಿನಿ ಇವರ ಮಗ ಕಂಸನ ಎಂಟು ಜನ ಮಂತ್ರಿಗಳಲ್ಲಿ ಒಬ್ಬ ಶ್ರೀಕೃಷ್ಣನ ಬಕ್ತ ಕಂಸನ ಅಪ್ಪಣೆಯಂತೆ ಬಲರಾಮ–ಕೃಷ್ಣರನ್ನು ಮದುರೆಗೆ ಕರೆದುಕೊಂಡು ಬರುವಾಗ ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿದ್ದನು ಆಗ ಶ್ರೀಕೃಷ್ಣನ ದಿವ್ಯರೂಪ ದರ್ಶನವಾಯಿತು

**ಅಜಮಿಳ** ಕಾನ್ಯಕುಬ್ಜದ ಒಬ್ಬ ಬ್ರಾಹ್ಮಣ ತಂದೆ–ತಾಯಿ–ಹೆಂಡತಿ ಇವರನ್ನೆಲ್ಲ ಬಿಟ್ಟು ಸೂಳೆಯ ಮನೆಯಲ್ಲಿ ದುರಾಚಾರದ ಜೀವನ ಸಾಗಿಸಿದ್ದ ಇವನ ಹತ್ತು ಮಕ್ಕಳಲ್ಲಿ ಕೊನೆಯವನ ಹೆಸರು ನಾರಾಯಣ ಸಾಯುವ ವೇಳೆಯಲ್ಲಿ ಅಜಮಿಳನು ತನ್ನ ಕೊನೆಯ ಮಗನ ಹೆಸರನ್ನು ನೆನೆದ ಈ 'ನಾರಾಯಣ' ನಾಮಸ್ಮರಣೆಯನ್ನು ಅಂತ್ಯದಲ್ಲಿ ಮಾಡಿದ್ದರಿಂದ ಶ್ರೀಹರಿಯು ಅವನಿಗೆ ಪರಮ ಪದವಿಯಿತ್ತು

**ಅಸುರನ ಉದರವ ಬಗೆದ** ನರಸಿಂಹಾವತಾರ

**ಅಹಲ್ಯಾ** ಗೌತಮ ಋಷಿಯ ಶಾಪದಿಂದ ಶಿಲೆಯಾದ ಅಹಲ್ಯಾದೇವಿ, ಇವಳು ಶ್ರೀರಾಮನ ಪಾದಸ್ಪರ್ಶದಿಂದ ಶಾಪಮುಕ್ತಳಾದಳು

**ಕಲ್ಲೊಳು ಕಾಂತೆಯ ಮಾಡಿದೆ** ಶ್ರೀರಾಮನಿಂದ ಶಿಲೆಯಾಗಿ ಬಿದ್ದ ಅಹಲ್ಯೆಯ ಉದ್ಧಾರ

**ಕಿನ್ನರರು** ಇವರು ಕಶ್ಯಪಮುನಿಯಿಂದ ಸುರಸೆಯಲ್ಲಿ ಜನಿಸಿದವರು ದೇಹ ಮನುಷ್ಯರಂತೆಯೂ, ಮುಖ ಕುದುರೆಯ ಮುಖದಂತೆಯೂ ಇರುವ ಒಂದು ಬಗೆಯ ದೇವತೆಗಳು ಇವರೆಲ್ಲರೂ ಕುಬೇರನ ಪ್ರಜೆಗಳು

ಕೂರ್ಮ ವಿಷ್ಣುವಿನ ಎರಡನೆಯ ಅವತಾರ ದೇವದಾನವರು ಸಮುದ್ರ ಮಥನಕ್ಕೆ ಮಂದರ ಪರ್ವತವನ್ನು ಕಡೆಗೋಲು ಮಾಡಿಕೊಂಡು, ವಾಸುಕಿಯನ್ನು ಹಗ್ಗವನ್ನು ಮಾಡಿಕೊಂಡು ಕಡೆಯುತ್ತಿರುವಾಗ ಮಂದರ ಪರ್ವತವು ಸಮುದ್ರದಡಿಯಲ್ಲಿ ಕೂತುಕೊಂಡಿತು ಆಗ ದೇವತೆಗಳೂ ದಾನವರೂ ಶ್ರೀವಿಷ್ಣುವಿಗೆ ಮೊರೆ ಇಡಲು ಆವನು ಕೂರ್ಮಾವತಾರ ತಾಳಿ, ತನ್ನ ಬೆನ್ನ ಮೇಲೆ ಮಂದರ ಪರ್ವತವನ್ನು ದರಿಸಿ ತಂದ

ಕೋದಂಡದೃತ ಕೋದಂಡವೆಂಬ ದನುಷ್ಯವನ್ನು ಹಿಡಿದ ಶ್ರೀರಾಮ

ಕೋರೆಯ ಮಸೆಯುತ ವರಾಹಾವತಾರ

ಕೌಸಲ್ಯಾದೇವಿ ಅಯೋಧ್ಯೆಯ ಅರಸ ದಶರಥರಾಜನ ಹಿರಿಯ ಪತ್ನಿ– ಶ್ರೀರಾಮನ ತಾಯಿ

ಗಿರಿಯ ಪೊದ್ದನಾತಾ ಗೋವರ್ಧನ ಗಿರಿಯನ್ನು ಬೆರಳಿನಿಂದ ಎತ್ತಿದ ಶ್ರೀ ಕೃಷ್ಣ

ಗೋಕುಲದೊಳು ಬಕ್ತರ ಪೊರೆದಾತ ಕೃಷ್ಣಾವತಾರ

ಚಂದನವತಿ ಒಂದು ಪಟ್ಟಣ ಕುಂತಳದೇಶದ ರಾಜದಾನಿ

ಚಂದ್ರಹಾಸ ಕೇರಳದೇಶದ ಅರಸನಾದ ಸುಧಾರ್ಮಿಕ ರಾಜನ ಮಗ ಈತನು ಮೂಲಾನಕ್ಷತ್ರದ ಅರಿಷ್ಟಾಂಶದಲ್ಲಿ ಜನಿಸಿದ್ದ ಇವನ ಎಡಗಾಲಿನಲ್ಲಿ ಆರು ಬೆರಳುಗಳಿದ್ದವು ಇವೆರಡರ ಪರಿಣಾಮವಾಗಿ ಇವನ ಬಾಲ್ಯದಲ್ಲಿಯೆ ಶತ್ರುಗಳು ಈತನ ತಂದೆಯನ್ನು ಕೊಂದು ರಾಜ್ಯವನ್ನು ಆಕ್ರಮಿಸಿಕೊಂಡರು ಬಳಿಕ ಒಬ್ಬ ದಾದಿಯಿಂದ ಪೋಷಿತನಾದ, ಕೊನೆಗೆ ಅವಳೂ ತೀರಿಕೊಳ್ಳಲು – ಬೀದಿಯ ಕೂಸಾಗಿ ಬೆಳೆದು ಮುಂದೆ ದೈವಬಲದಿಂದ – ದುಷ್ಟ ಬುದ್ಧಿಯಂಥ ದುಷ್ಟನ ಅನೇಕ ಕಾರಾಸ್ಥಾನಗಳಿಂದ ಪಾರಾಗಿ ಕುಂತಳದೇಶದ ರಾಜನಾದನು ಪ್ರಜೆಗಳನ್ನು ಮಕ್ಕಳೆಂದು ತಿಳಿದು ಆಳಿದನು

ಚಂಪಕಮಾಲೆ ಈಕೆ ಕುಂತಳೇಶ್ವರನ ಪುತ್ರಿ ಕುಂತಳದೇಶದ ಮಂತ್ರಿ ದುಷ್ಟ ಬುದ್ಧಿಯ ಮಗಳಾದ ವಿಷಯೆಯ ಗೆಳತಿ–

ಜಟಾಯು  ವಿನತೆಯ ಪುತ್ರ – ಅರುಣನ ಕಿರಿಯ ಮಗ ಒಬ್ಬ ಪಕ್ಷಿರಾಜ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುವುದನ್ನು ಕಂಡು, ಅವನನ್ನು ಎದುರಿಸಿದಾಗ ರಾವಣನು ಯುಕ್ತಿಯಿಂದ ಇವನ ರೆಕ್ಕೆಗಳನ್ನು ಕತ್ತರಿಸಿದಾಗ ಮೂರ್ಛೆ ಹೊಂದಿ ನೆಲಕ್ಕೆ ಬಿದ್ದನು ಮುಂದೆ ರಾಮ ಲಕ್ಷ್ಮಣರು ಸೀತಾದೇವಿಯನ್ನು ಹುಡುಕುತ್ತ ಹೊರಟಾಗ, ದಾರಿಯಲ್ಲಿ ಬಿದ್ದ ಜಟಾಯುವಿನಿಂದ ನಿಜ ಸಂಗತಿಯನ್ನು ತಿಳಿದರು

ತಪವಳಿದು ಪತಿವ್ರತೆಯರನು  ಬೌದ್ಧಾವತಾರ

ತಾಟಕಿ  ಒಬ್ಬ ರಾಕ್ಷಸಿ, ಸುಕೇತುವೆಂಬ ಯಕ್ಷನ ಮಗಳು ವಿಶ್ವಾಮಿತ್ರ ಮಹರ್ಷಿಗಳು ಇವಳ ಕಾಟವನ್ನು ತಪ್ಪಿಸಲು ಶ್ರೀರಾಮನಿಂದ ಇವಳನ್ನು ಕೊಲ್ಲಿಸಿದರು

ತ್ರಿಪುರ  ಮಯನೆಂಬ ರಾಕ್ಷಸನಿಂದ ನಿರ್ಮಿತವಾದ ಭೂಮಿಯ ಮೇಲೆ ಕಬ್ಬಿಣದ ನಗರ–ಅಂತರಿಕ್ಷದಲ್ಲಿ ಬೆಳ್ಳಿಯ ನಗರ, ಅದರ ಮೇಲ್ಭಾಗದಲ್ಲಿ ಸುವರ್ಣ ನಗರ – ಈ ಮೂರೂ ನಗರಗಳನ್ನು ಪರಮೇಶ್ವರನು ಸುಟ್ಟು ಬಸ್ಮ ಮಾಡಿದನು

ತ್ರಿಬಂಗಿಯಾಗಿದ್ದ ಕುಬ್ಜೆಯ ತನುಯೆತ್ತಿ  ಕಂಸನ ದಾಸಿಯಾದ ಗೂನು ಬೆನ್ನಿನ ಕುಬ್ಜೆಯನ್ನು ಸುಂದರಳನ್ನಾಗಿ ಮಾಡಿದ ಶ್ರೀಕೃಷ್ಣ

ತೇಜಿ ಹತ್ತಿ ಮೆರೆಯೋದೊಂದು ಯೋಗ  ಕಲ್ಕ್ಯಾವತಾರ

ದುಷ್ಟಬುದ್ಧಿ  ಕುಂತಲದೇಶದ ರಾಜನ ಮಂತ್ರಿ ವಿಷಯೆಯ ತಂದೆ ತನ್ನ ಮಗನಾದ ಮದನನನ್ನು ಕುಂತಳದೇಶದ ರಾಜಪಟ್ಟಕ್ಕೆ ಕುಳ್ಳಿರಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಇವನು ಚಂದ್ರಹಾಸನನ್ನು ಕೊಲ್ಲಿಸಲು ಅನೇಕ ಕಾರಸ್ಥಾನಗಳನ್ನು ಮಾಡಿದನು ಆದರೆ ದೈವೇಚ್ಛೆಯೇ ಬೇರೆಯಾಗಿತ್ತು ಚಂದ್ರಹಾಸನೇ ಅರಸನಾದನು, ದುಷ್ಟಬುದ್ಧಿಯ ಮಗಳಾದ ವಿಷಯೆಯ ಪಾಣಿಗ್ರಹಣವನ್ನೂ ಮಾಡಿದ

ದ್ರುವ  ಸ್ವಾಯಂಬುವ ಮನುವಿನ ಮೊಮ್ಮಗನಾದ ಉತ್ತಾನಪಾದ ರಾಜನ ಹಿರಿಯ ಹೆಂಡತಿಯಾದ ಸುನೀತಿಯ ಮಗ

ನಾರುವ ಮೈಯ ಮತ್ಸ್ಯಾವತಾರ

ಪತಿವ್ರತೆಯ ವ್ರತವಳಿದಂಥ ಬೌದ್ಧಾವತಾರ

ಪರಶುರಾಮ ಭೃಗುವಂಶದ ಜಮದಗ್ನಿ ಮಹರ್ಷಿಯಿಂದ ಪ್ರಸೇನಜಿತನೆಂಬ ಅರಸನ ಮಗಳಾದ ರೇಣುಕೆಯೆಂಬವಳಲ್ಲಿ ಜನಿಸಿದ; ಮಹಾವಿಷ್ಣುವಿನ ಆರನೆಯ ಅವತಾರ ಮಹಾ ಪರಾಕ್ರಮಶಾಲಿ ಉನ್ಮತ್ತರಾದ ಕ್ಷತ್ರಿಯರನ್ನು ನಿರ್ನಾಮಗೊಳಿಸುವ ಉದ್ದೇಶದಿಂದ ವಿಷ್ಣುವು ಈ ಪರಶುರಾಮಾವತಾರ ತಾಳಿದ

ಪರಾಶರ ವಸಿಷ್ಠ ಪುತ್ರನಾದ ಶಕ್ತಿಮಹರ್ಷಿಯಿಂದ ಅದೃಶ್ಯಂತಿಯೆಂಬಾಕೆಯಲ್ಲಿ ಹುಟ್ಟಿದವನು ಇವನೂ ಮಹರ್ಷಿ ಇವನು ಭೂಮಂಡಲದ ತೀರ್ಥಯಾತ್ರೆ ಕೈಕೊಂಡಾಗ ಯಮುನಾ ನದಿಯ ಬಳಿಗೆ ಬರುವಲ್ಲಿ, ಒಬ್ಬ ಬೆಸ್ತರವ ಊಟ ಮಾಡುತ್ತಿದ್ದ ಋಷಿ ಶಾಪ ಕೊಟ್ಟನೆಂಬ ಭಯದಿಂದ ತನ್ನ ಸಾಕುಮಗಳಾದ ಮತ್ಸ್ಯಗಂದಿ (ಸತ್ಯವತಿ) ಎಂಬವಳನ್ನು ಡೋಣಿ ನಡೆಸಲು ಕಳುಹಿದ ಆಗ ಪರಾಶರರು ಅವಳ ಸೌಂದರ್ಯಕ್ಕೆ ಮೋಹಿತರಾಗಿ, ಆಕೆಯ ದೇಹದ ನಾತ ತೊಲಗಿ ದಿವ್ಯ ಪರಿಮಳ ಸೂಸುವಂತೆ ಕರುಣಿಸಿ, ಆಕೆಯೊಡನೆ ಕಲೆತರು ಇವಳ ಗರ್ಭದಿಂದಲೇ ಶ್ರೀ ವ್ಯಾಸರು ಜನಿಸಿದರು

ಪ್ರಹ್ಲಾದ ಹಿರಣ್ಯಕಶಿಪುವಿನಿಂದ ಕಯಾಧು ಎಂಬವಳಲ್ಲಿ ಜನಿಸಿದ ಶ್ರೀಹರಿಯ ಮಹಾಭಕ್ತ ಆದರೆ ತಂದೆ ಶ್ರೀಹರಿಯ ಕಡುವೈರಿ ಇದರಿಂದಾಗಿ ತಂದೆಯಿಂದ ಅನೇಕ ಪ್ರಾಣಾಂತಿಕ ಹಿಂಸೆಗಳನ್ನು ಶ್ರೀಹರಿಕೃಪೆಯಿಂದ ತಾಳಿದನು ಕೊನೆಗೆ ತಂದೆಯ ಉಪದ್ರವ ಹಾಗೂ ಶ್ರೀಹರಿಯ ನಿಂದೆ ಮಿತಿಮೀರಿದಾಗ ತಂದೆ–ಮಗನ ವಾಗ್ವಾದದಲ್ಲಿ ಕಂಬದಿಂದ ಸಿಡಿದು ನರಸಿಂಹ ರೂಪ ತಾಳಿ ಬಂದ ಶ್ರೀಹರಿಯು ಹಿರಣ್ಯಕಶಿಪುವನ್ನು ವಧಿಸುತ್ತಾನೆ ಪ್ರಹ್ಲಾದನನ್ನು ಉದ್ಧರಿಸುತ್ತಾನೆ

ಪಿತನಾಡಿದ ಶಬ್ದವನು ಕೇಳಿ ಮಾತೆಯ ಶಿರವನರಿದೆ ಪರಶುರಾಮ– ತಂದೆಯಾದ ಜಮದಗ್ನಿ ಋಷಿಯ ಆಜ್ಞೆಯಂತೆ ಮಾತೆಯಾದ ರೇಣುಕೆಯ ಶಿರವನ್ನು ಕತ್ತರಿಸಿದ ನಂತರ ತಂದೆಯ ಸಿಟ್ಟು ಇಳಿದು, ಮಗನ ಆಜ್ಞಾಪಾಲನೆಯಿಂದ

ಸಂತೋಷಪಟ್ಟು ವರ ಬೇಡಲು ಪರಶುರಾಮನಿಗೆ ಹೇಳಲು, ಅವನು ತನ್ನ ತಾಯಿಯನ್ನೂ, ಸಹೋದರರನ್ನೂ ಬದುಕಿಸಬೇಕೆಂದು ವರ ಕೇಳಿ ಪಡೆದನು

ಬಡಬ್ರಾಹ್ಮಣನಾಗಿ ತಿರಿದ ವಾಮನಾವತಾರ

ಬತ್ತಲೆ ನಿಂತಿದ್ದನಾಗ ಬೌದ್ಧಾವತಾರ

ಬಲಿ ಪ್ರಹ್ಲಾದನ ಪುತ್ರನಾದ ವಿರೋಚನನ ಮಗ ಇವನು ಇಂದ್ರನನ್ನು ಸೋಲಿಸಿ ಅಶ್ವಮೇಧ ಯಜ್ಞ ಮಾಡತೊಡಗಿದ ಆಗ ಬ್ರಹ್ಮಾದಿಗಳ ಮೊರೆಯನ್ನು ಕೇಳಿ, ಶ್ರೀವಿಷ್ಣುವು ಅದಿತಿಯ ಪುತ್ರನಾಗಿ ವಾಮನ ರೂಪದಿಂದ ಅವತರಿಸಿ, ಉಪನಯನದ ನಂತರ ಬಲಿ ಚಕ್ರವರ್ತಿಯ ಬಳಿಗೆ ಬಂದು, ಅವನಿಂದ ಆದರಪೂರ್ವಕವಾಗಿ ಪೂಜಿಸಲ್ಪಟ್ಟನು ನಂತರ ಬಲಿಯಿಂದ ಮೂರು ಅಡಿ ಬೂಮಿ ದಾನ ಬೇಡಿದ ದೈತ್ಯರ ಗುರುಗಳಾದ ಶುಕ್ರಾಚಾರ್ಯರು ಬೇಡವೆಂದು ಎಷ್ಟು ಹೇಳಿದರೂ, ಅದನ್ನು ಕೇಳದೆ, ವಾಮನಮೂರ್ತಿಗೆ ದಾನ ನೀಡಲು ಸಮ್ಮತಿಸಿದ – ದಾನಶೂರನಾದ ಬಲಿಚಕ್ರವರ್ತಿ,ವಾಮನನು ತ್ರಿವಿಕ್ರಮನ ರೂಪದಿಂದ ಬೂಮ್ಯಂತರಿಕ್ಷಗಳನ್ನು ಎರಡು ಅಡಿಗಳಿಂದ ಅಳೆದು ಮೂರನೆಯ ಅಡಿಯನ್ನೆಲ್ಲಿ ಇಡಲೆಂದು ಕೇಳಿದುದಕ್ಕೆ, ಬಲಿ, ತನ್ನ ಮಸ್ತಕದಲ್ಲಿರಿಸಲು ಹೇಳಿದ ದಾನವ ಚಕ್ರವರ್ತಿಯನ್ನು ಪರಮಾತ್ಮ ಪಾತಾಳಕ್ಕೆ ಮೆಟ್ಟಿಯೂ ಕೂಡ, ಅವನ ಔದಾರ್ಯ ಹಾಗೂ ಬಕ್ತಿಗೆ ಮೆಚ್ಚಿ ಅವನಿಗೆ ಚಿರಂಜೀವಿ ಪದವಿಯನ್ನು ಅನುಗ್ರಹಿಸುತ್ತಾನೆ

ಬಲು ಬೆಟ್ಟ ಬೆರಳಲ್ಲಿ ಇಟ್ಟಂಥ ಗೋವರ್ದನ ಗಿರಿಯನ್ನು ಬೆರಳಿನಿಂದ ಎತ್ತಿದ ಶ್ರೀಕೃಷ್ಣ

ಬಚ್ಚಿಟ್ಟ ಧರಣಿಯನು ಬಲುಮೆಯಿಂದಲಿ ತಂದೆ ವರಾಹಾವತಾರ

ಬರದಿ ವಾಜಿಯನೇರಿ ಕಲ್ಕ್ಯಾವತಾರ

ಬಾರತೀದೇವಿ ಮುಖ್ಯಪ್ರಾಣದೇವರ ಪತ್ನಿ

ಭೂತಮೂಲದಲಿ ಪಂಚಭೂತಗಳಿಗಿಂತಲೂ ಮೊದಲು, ಆದಿಯಲ್ಲಿ

ಮಡದಿಗಾಗಿ ದೊಡ್ಡಡವಿಯೊಳ್ ಮನೆಕಟ್ಟಿ  ರಾಮಾವತಾರ

ಮದನ  ಮಂತ್ರಿ ದುಷ್ಟಬುದ್ಧಿಯ ಮಗ

ಮಹಿಷಾಸುರ  ಒಬ್ಬ ರಾಕ್ಷಸ ದಿತಿಯ ಮಕ್ಕಳನ್ನೆಲ್ಲ ಇಂದ್ರ ಸಂಹರಿಸಲಾಗಿ, ದಿತಿಯು ಸುಪಾರ್ಶ್ವಮುನಿಯ ಆಶ್ರಮದ ಹತ್ತಿರ ಎಮ್ಮೆಯಾಗಿ ನಿಂತು ತಪಸ್ಸು ಮಾಡಿದಳು ಆಗ ಬ್ರಹ್ಮ ಅಲ್ಲಿಗೆ ಬಂದು ಅವಳ ಅಭಿಪ್ರಾಯದಂತೆ 'ನಿನಗೆ ಅತ್ಯಂತ ಬಲಶಾಲಿ ಪುತ್ರ ಜನಿಸುವನೆಂದು' ಹೇಳಿ ಹೋದ ಆಗ ಸುಪಾರ್ಶ್ವನು ಕೋಣದಂತಹ ಮಗ ಹುಟ್ಟುವನೆಂದ ಆಗ ದಿತಿ ಮರಳಿ ಬ್ರಹ್ಮನನ್ನು ಬೇಡಲು ಮುಖ ಮಾತ್ರ ಕೋಣನಂತೆ, ಮಿಕ್ಕ ಆಕಾರವೆಲ್ಲ ಮನುಷ್ಯನಂತಿರುವುದು ಎಂದು ಅನುಗ್ರಹಿಸಿದ ಮುಂದ ಅವನು ದೇವತೆಗಳು ನಿರ್ಮಿಸಿದ ಶಕ್ತಿದೇವಿಯಿಂದ ಹತನಾದ

ಮಾರೀಚ  ಸುಂದನೆಂಬ ರಾಕ್ಷಸನಿಂದ ಸುಕೇತುಪುತ್ರಿಯಾದ ತಾಟಕೆಯೆಂಬ ಯಕ್ಷ ಸ್ತ್ರೀಯಲ್ಲಿ ಜನಿಸಿ ಅಗಸ್ತ್ಯ ಋಷಿಯ ಶಾಪದಿಂದ ರಾಕ್ಷಸನಾದ ವಿಶ್ವಾಮಿತ್ರ ಸಿದ್ಧಾಶ್ರಮದಲ್ಲಿ  ಯಾಗ ಮಾಡುತ್ತಿದ್ದಾಗ ಇವನು ಆ ಯಜ್ಞವನ್ನು ಕೆಡಿಸಲು ಹೋದಾಗ ಶ್ರೀರಾಮನ ವಾಯವ್ಯಾಸ್ತ್ರದಿಂದ ಸಮುದ್ರದ ಆಚೆಗೆ ಬಿದ್ದ ಮುಂದೆ ಸೀತಾದೇವಿಯನ್ನು ಅಪಹರಿಸುವಲ್ಲಿ ಸಹಾಯ ಮಾಡಲು ರಾವಣ ಕೇಳಬಂದಾಗ, ಅವನಿಗೆ ರಾಮನ ಸಾಮರ್ಥ್ಯದ ಬಗ್ಗೆ ಉಪದೇಶಿಸಿ ವಿಫಲನಾದ ನಂತರ ರಾವಣನ ಇಚ್ಛೆಯಂತೆ ಮಾಯದ ಸುವರ್ಣ ಜಿಂಕೆಯಾಗಿ ಸೀತೆಯ ಮುಂದ ಸುಳಿದಾಡಿದಾಗ ಅವಳು ಆಕರ್ಷಿತಳಾಗಿ, ಆ ಜಿಂಕೆ ತಂದು ಕೊಡಲು ರಾಮನಿಗೆ ಬೇಡಿದಳು ರಾಮನು ಅದರ ಬೆನ್ನು ಹತ್ತಿ ದೂರ ಹೋಗಿ ಅದನ್ನು ವಧಿಸಿದ

ಮೇದಾವತಿ  ಪುಳಿಂದರಾಜನ ಪತ್ನಿ

ವ್ಯಾಸ  ವೇದ ವಿಭಾಗವನ್ನು ಮಾಡಿದ ಮಹರ್ಷಿ ಮಹಾಭಾರತವನ್ನು ಗಣಪತಿಯಿಂದ ಅಖಂಡವಾಗಿ ಬರೆಯಿಸಿದ ಮಹಾ ಮುನಿ

ವಿಭೀಷಣ  ಪೌಲಸ್ತ್ಯ ಮಹಾಮುನಿಯಿಂದ ಕೈಕಸೆಯಲ್ಲಿ ಜನಿಸಿದ ನಾಲ್ಕನೆಯ

ಮಗ ರಾವಣ, ಕುಂಬಕರ್ಣ ಇವನ ಅಣ್ಣಂದಿರು ಶೂರ್ಪನಖಿ ಇವನ ಅಕ್ಕ ಇವನು ಶ್ರೀರಾಮನ ಬಕ್ತ ಅಣ್ಣನಾದ ರಾವಣ, ಪತಿವ್ರತೆಯೂ ಸಾಕ್ಷಾತ್ ಶ್ರೀದೇವಿಯೂ ಆದ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಲು ತಿಳಿಸಿದರೂ ಅವನು ಕೇಳದೆ ಇವನನ್ನೇ ಲಂಕೆಯಿಂದ ಹೊರಗೆ ಹಾಕಿದ ಆಗ ಇವನು ಶ್ರೀರಾಮನ ಪಕ್ಷಕ್ಕೆ ಬಂದನು ಮುಂದೆ ರಾವಣಾದಿಗಳ ವದೆಯಾದ ನಂತರ ಶ್ರೀರಾಮನು ವಿಬೀಷಣನಿಗೆ ಲಂಕೆಯ ಪಟ್ಟಗಟ್ಟಿದನು

ವಿಷಯೆ ದುಷ್ಟಬುದ್ಧಿಯ ಮಗಳು – ಚಂದ್ರಹಾಸನ ಹೆಂಡತಿ

ಸಾಂದೀಪನಿಗೊಲಿದೆ ಶ್ರೀ ಕೃಷ್ಣನ ಗುರುಗಳಾದ ಸಾಂದೀಪಮುನಿಗಳ ಮೃತನಾದ ಮಗನನ್ನು ಶ್ರೀಕೃಷ್ಣ ಮರಳಿ ತಂದು ಒಪ್ಪಿಸಿ, ಸಾಂದೀಪರಿಗೆ ಒಲಿದುದು

ಸಾಗರ ಮಥಿಸಿ ಸುದೆ ತಂದ ದೇವ ದಾನವರು ಕ್ಷೀರಸಾಗರ ಮದನ ಮಾಡುವಾಗ ಬಂದ ಅಮೃತ ಕಲಶವನ್ನು ವಿಷ್ಣುವು ಮೋಹಿನಿ ರೂಪದಿಂದ ತಂದು ದೇವತೆಗಳಿಗೆ ಹಂಚಿದ

ಹಿತವಾಜಿಯನೇರಿ ಮರ್ದಿಸಿದಂಥ ಕಲ್ಕ್ಯಾವತಾರ

ಹಿರಣ್ಯಕಾಸುರ ಒಬ್ಬ ರಾಕ್ಷಸ ಕಶ್ಯಪಮುನಿಯಿಂದ ದಿತಿಯೆಂಬ ಪತ್ನಿಯಲ್ಲಿ ಜನಿಸಿದ ಇಬ್ಬರು ಪುತ್ರರಲ್ಲಿ ಹಿರಿಯವ ಶ್ರೀಹರಿಯ ಕಡುವೈರಿ ಇವನ ಮಗನಾದ ಪ್ರಹ್ಲಾದನು ಶ್ರೀ ಹರಿಯ ಕಡು ಬಕ್ತ ಆದ್ದರಿಂದ ಮಗನು ಮಾಡುವ ಶ್ರೀಹರಿಯ ಸ್ತುತಿಯನ್ನು ತಾಳಲಾರದೆ ಅನೇಕ ಕ್ರೂರ ಹಿಂಸೆಗಳನ್ನು ಕೊಟ್ಟರೂ ಶ್ರೀ ಹರಿ ಕೃಪೆಯಿಂದ ಅವನಿಗೆ ಏನೂ ಅಪಾಯ ಸಂಭವಿಸಲಿಲ್ಲ ಕೊನೆಗೆ ಹಿರಣ್ಯಕನು ಅತ್ಯಂತ ಮದೋನ್ಮತ್ತನಾಗಿ ಪ್ರಹ್ಲಾದನನ್ನೂ ಶ್ರೀಹರಿಯನ್ನೂ ನಿಂದಿಸಲು ತೊಡಗಿದಾಗ, ಕಂಬದಿಂದ ಶ್ರೀಹರಿಯು ನರಸಿಂಹನಾಗಿ ಹೊರಗೆ ಬಂದು ಅವನನ್ನು ವಧಿಸಿದನು

ಕ್ಷೀರಾಂಬುದಿ ಮಥನ ಅಮೃತಪ್ರಾಪ್ತಿಗಾಗಿ ದೇವ–ದಾನವರು ಇದನ್ನು ಮದನ–ಮಾಡಿದರು

# ಹೆಳವನಕಟ್ಟೆ ಶ್ರೀ ಗಿರಿಯಮ್ಮನವರ ಸೇವಾ ಸಮಿತಿ

**ಕೊಮಾರನಹಳ್ಳಿ — ಮಲೇಬೆನ್ನೂರು — ೫೭೭ ೫೩೦**

**ಹರಿಹರ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ**

ಭಕ್ತಾಭಿಮಾನಿಗಳಲ್ಲಿ ವಿನಂತಿ,

ಚಿತ್ರದುರ್ಗ ಜಿಲ್ಲೆ ಹರಿಹರ ತಾಲ್ಲೂಕಿನ ಕೊಮಾರನಹಳ್ಳಿಯಲ್ಲಿ ಇರುವ ಹೆಳವನಕಟ್ಟೆ ಶ್ರೀ ಲಕ್ಷ್ಮೀರಂಗನಾಥ ದೇವಾಲಯವು ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ಪ್ರಸಿದ್ಧ ದೇವಾಲಯವೆಂದು ಖ್ಯಾತಿ ಪಡೆದಿದ್ದು ಅಪಾರ ಭಕ್ತ ವೃಂದವನ್ನು ಹೊಂದಿದೆ

ಅಲ್ಲದೆ ಹದಿನೆಂಟನೇ ಶತಮಾನದಲ್ಲಿ ಮಲೆಬೆನ್ನೂರಿನವರೇ ಆಗಿದ್ದ ಶ್ರೀ ಹೆಳವನಕಟ್ಟೆ ಗಿರಿಯಮ್ಮನವರು ಶ್ರೀ ರಂಗನಾಥನ ಅಂತರಂಗ ಭಕ್ತರಾಗಿದ್ದು, ತಮ್ಮ ಶ್ರೇಷ್ಠ ಭಕ್ತಿಯಿಂದ ರಂಗನಾಥನನ್ನು ಒಲಿಸಿಕೊಂಡು ಜಗತ್ತಿನ ಕಲ್ಯಾಣಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟು, ಅನೇಕ ಕೃತಿಗಳನ್ನು ರಚಿಸಿ ಪ್ರಸಿದ್ಧಿ ಪಡೆದಿದ್ದಾರೆ

ಇಂತಹ ದಿವ್ಯ ಸನ್ನಿಧಿಯಲ್ಲಿ ಶ್ರೀ ರಂಗನಾಥಸ್ವಾಮಿಗೆ ವಿಶೇಷ ಸೇವೆ, ಉತ್ಸವಗಳನ್ನು, ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡು ಸಮಾಜ ಸೇವೆ ನಡೆಸುವ ಉದ್ದೇಶವನ್ನು ಹೊಂದಿ, ಮೇಲ್ಕಂಡ "ಹೆಳವನಕಟ್ಟೆ ಶ್ರೀ ಲಕ್ಷ್ಮೀರಂಗನಾಥ ಸ್ವಾಮಿಯ ಅನನ್ಯ ಭಕ್ತಳಾಗಿದ್ದ ಶ್ರೀ ಹೆಳವನಕಟ್ಟೆ ಗಿರಿಯಮ್ಮನವರ ಸೇವಾ ಸಮಿತಿ ಎಂಬ ಸಾಂಸ್ಕೃತಿಕ ಸಂಘವು 4–5–1992ನೇ ದಿನ ಸ್ಥಾಪನೆಯಾಗಿ ವಿವಿಧ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ

ಆದ್ದರಿಂದ ಭಕ್ತ ಮಹಾಶಯರು ಉದಾರ ಹಸ್ತದಿಂದ ಈ ಸಮಿತಿಗೆ ತನು–ಮನ–ಧನದಿಂದ ಸಹಾಯ ನೀಡಿ, ಸಮಿತಿಯು ಹಾಕಿಕೊಂಡಿರುವ ಕಾರ್ಯಗಳನ್ನು ನಡೆಸಲು ಅನುವು ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇವೆ

| *ಅಧ್ಯಕ್ಷರು* | *ಕಾರ್ಯದರ್ಶಿ* |
| --- | --- |
| **ಡಿ ಮಾಧವರಾವ್** | **ಡಿ ಆರ್ ಲಕ್ಷ್ಮಣರಾವ್** |
| ಮಲೆಬೆನ್ನೂರು | ಮಲೆಬೆನ್ನೂರು |

# ಕಾಕೋಳು ಗ್ರಾಮದ ಒಂದು ಸಮೀಕ್ಷೆ

ಒಂದು ಕ್ಷೇತ್ರದ ಇತಿಹಾಸವೆಂದರೆ ಆ ಜನತೆಯ ಇತಿಹಾಸ ಹಾಗೆಯೇ ಅವರು ಬದುಕಿದ ರೀತಿ ಅನುಸರಿಸಿದ ಧರ್ಮ ಸಾಂಸ್ಕೃತಿಕ ಪ್ರಜ್ಞೆ ಕಟ್ಟಿದ ಕಲೆ, ಜೀವನದ ಮೌಲ್ಯಗಳು ಇವೆಲ್ಲ ವಿಶಿಷ್ಟವಾಗಿ ಮೇಳೈಸಿದ ಕ್ಷೇತ್ರ ಕಾಕೋಳು ಕ್ಷೇತ್ರ ಬೃಂದಾವನದಲ್ಲಿ ನಿಂತು ಕೊಳಲನೂದುತ್ತಾ ಭಕುತ ಜನರನ್ನು ತನ್ನೆಡೆಗೆ ಸೆಳೆಯುತ್ತಿರುವ ಕಾಕೋಳು ಶ್ರೀ ವೇಣುಗೋಪಾಲ ಕೃಷ್ಣನ ಮಹಿಮೆಯನ್ನು ವರ್ಣಿಸಲಸದಳ ಭಕ್ತರ ಮನದಲ್ಲಿ ನಾಟ್ಯವಾಡುತ್ತಾ ದುಷ್ಟರ ಸೊಲ್ಲು ಮುರಿವ ಈ ತುಂಟ ವೇಣುಗೋಪಾಲನ ಮೂರುತಿ ಕಾಕೋಳು ಗ್ರಾಮಕ್ಕೆ ಬಂದು ಇಲ್ಲಿನ ಪುರವಾಸಿಗಳನ್ನು ಅನುಗ್ರಹಿಸುತ್ತಾ ಬಂದಿರುವನು

ಹಿಂದೆ ಕಾಕೋಳು ಹೆಸರುಘಟ್ಟ (ವ್ಯಾಸರಘಟ್ಟ) ಅಂದರೆ ಹೆಸರುಘಟ್ಟದ ಮದರ್ ಡೈರಿಯ ಎದುರೇ ನಿರ್ಮಿತವಾಗಿತ್ತು ಅನಂತರ ೧೯೦೨ರಲ್ಲಿ ಈ ಗ್ರಾಮವು ಈಗ ನಿರ್ಮಿತವಾಗಿರುವ ಜಾಗಕ್ಕೆ ಸ್ಥಳಾಂತರಿಸಿತು

ಬೆಂಗಳೂರಿಗೆ 30 ಕಿ ಮೀ ಸಮೀಪವಿರುವ ಕಾಕೋಳು ಗ್ರಾಮ ಬೆಂಗಳೂರು ದೊಡ್ಡಬಳ್ಳಾಪುರದ ರಸ್ತೆಯ ಮಧ್ಯೆ ಸಿಗುವ ರಾಜಾನುಕುಂಟೆ ಬಸ್ ನಿಲ್ದಾಣದ ಎಡಬದಿಗೆ ತಿರುಗುವ ರಸ್ತೆಗೆ ಐದಾರು ಕಿ ಮೀ ದೂರ ಮಾತ್ರವೇ ಇದ್ದು ಇದೊಂದು ಪ್ರೇಕ್ಷಣೀಯ ಸ್ಥಳವಾಗಿದೆ

ಊರನ್ನು ಪ್ರವೇಶಿಸುತ್ತಿರುವಂತೆಯೇ ರಸ್ತೆಯ ಇಕ್ಕೆಡೆಗಳಲ್ಲಿಯೂ ಸ್ವಾಗತಿಸುವ ಕಂಪು ಬೀರುವ ಪಾದರಿ ಗಿಡಗಳು, ಅರಳೀಗಿಡ, ಕಟ್ಟೆ ರಸ್ತೆಯ ಇಬ್ಬಾಗದಲ್ಲೂ ನಿರ್ಮಿಸಲ್ಪಟ್ಟ ವಸತಿಗೃಹಗಳು, ಆಧುನಿಕತೆಯಲ್ಲೇ ಮಿಂಚಿದರೂ ಗ್ರಾಮೀಣ ಸಂಸ್ಕೃತಿಯಿಂದ ಬೇರ್ಪಟ್ಟಿಲ್ಲ

ಕಾಕೋಳು ಶ್ಯಾನುಭೋಗರಾದ ಶ್ರೀ ನರಸಣ್ಣ ಹಾಗೂ ಶೇಷಗಿರಿರಾಯರು, ಶ್ರೀ ವೇಣುಗೋಪಾಲ ಸ್ವಾಮಿ ಬೃಂದಾವನವನ್ನು ಹಳೇ ಕಾಕೋಳಿನಿಂದ ತಂದು

ಪುನರ್ ಪ್ರತಿಷ್ಠೆ ಮಾಡಿದರು ಶ್ರೀ ನರಸಣ್ಣ, ಶೇಷಗಿರಿರಾಯರು ಚಿಕ್ಕವರಿದ್ದಾಗಲೇ ತಂದೆ ತಾಯಿಯನ್ನು ಕಳೆದುಕೊಂಡು ಇವರಿಬ್ಬರನ್ನೂ ಇವರ ಅಜ್ಜಿ ಗಿರಿಯಮ್ಮನವರು ಮದಗೊಂಡನ ಹಳ್ಳಿಗೆ ಕರೆದುಕೊಂಡು ಹೋಗಿ ಬೆಳಸಿದರು

ಈ ಶ್ಯಾನುಬೋಗವಂಶದವರು ಅರವತ್ತೊಕ್ಕಲು ಮನೆತನದವರಾಗಿದ್ದು ಈ ಮನೆತನದವರ ಉದಾರಬುದ್ಧಿ ಪ್ರೀತಿ ವಿಶ್ವಾಸಗಳಿಗೆ ಸಕಲರೂ ಪಾತ್ರರಾಗಿ ಇವರಲ್ಲಿ ಅತಿಥಿಗಳಾಗಿ ಬಂದವರು ವಾರಗಟ್ಟಲೆ ಇವರ ಆತಿಥ್ಯ ಸ್ವೀಕರಿಸಿ ಸಂತೃಪ್ತರಾಗುತ್ತಿದ್ದರು ಈ ಮನೆತನದ ಒಟ್ಟು ಜನಸಂಖ್ಯೆ ಸುಮಾರು ಐನೂರು ಮಂದಿ ಎಂದು ಹೇಳಬಹುದು

1908ರಲ್ಲಿ ಹಳೇಕಾಕೋಳಿನಿಂದ ಪ್ರಾಣದೇವರನ್ನು ಹೊಸ ಕಾಕೋಳಿಗೆ ತಂದು ಪ್ರತಿಷ್ಠಾಪಿಸಲಾಯ್ತು

ಶ್ಯಾನುಬೋಗ ಶ್ರೀ ನರಸಣ್ಣನವರಿಗೆ, ಸ್ವಪ್ನದಲ್ಲಿ ಶ್ರೀಗೋಪಾಲಕೃಷ್ಣ ಕಂಡಂತೆಯೂ, ತನ್ನನ್ನು ಕಾಕೋಳಿಗೆ ಕರೆದುಕೊಂಡು ಹೋಗುವಂತೆಯೂ, ಆದೇಶ ನೀಡಿದಂತಾಯ್ತು ಅದೇ ಪ್ರಕಾರ ಚಿಕ್ಕದಾಪುರದ ಕೆರೆಯಲ್ಲಿ ಶ್ರೀಕೃಷ್ಣನ ಬೃಂದಾವನ ವನ್ನು ಶೋಧಿಸಿ ಹೊಸಕಾಕೋಳಿನಲ್ಲಿ ಪುನರ್ ಪ್ರತಿಷ್ಠೆ ಮಾಡಿರುತ್ತಾರೆ ಈಗ ಚಿಕ್ಕದಾಪುರದಲ್ಲಿ ಗೋಪಾಲ ಶ್ರೀನಿವಾಸರ ಗುಡಿ ಇದೆ ಶ್ರೀ ವೇಣುಗೋಪಾಲ ಸ್ವಾಮಿ ರಥೋತ್ಸವದ ಆಚರಣೆಯೂ ಇವರ ಕಾಲದಲ್ಲಿಯೇ ಆರಂಬವಾಗಿದೆ ಇಂದಿಗೂ ಶ್ರೀ ವೇಣುಗೋಪಾಲ ಸ್ವಾಮಿಯ ಬ್ರಹ್ಮ ರಥೋತ್ಸವ ಅತೀ ವೈಬವದಿಂದ ಕಾಕೋಳಿನಲ್ಲಿ ಪ್ರತಿ ವರ್ಷ ಚೈತ್ರ ಶುದ್ಧ ಪಂಚಮಿಯಂದು ನಡೆಸಲಾಗುವುದು ಶ್ರೀಯುತ ನರಸಣ್ಣ ಸಹೋದರರು ನಿಧನರಾದ ನಂತರ ಅವರ ಮಕ್ಕಳು, ಮೊಮ್ಮಕ್ಕಳು, ದೇವಸ್ಥಾನದ ಜೀರ್ಣೋದ್ಧಾರ, ನೂತನ ರಥ ನಿರ್ಮಾಣ, ದೇವಸ್ಥಾನಕ್ಕೆ ಅಂಟಿಕೊಂಡಂತೆ ಕಲ್ಯಾಣಮಂಟಪ, ಬೃಂದಾವನದೆದುರಿಗೆ ಶ್ರೀವೇದವ್ಯಾಸರ ಮತ್ತು ಶ್ರೀ ಮಧ್ವಾಚಾರ್ಯರ, ಮೂರ್ತಿಗಳ ಪ್ರತಿಷ್ಠೆ ಇತ್ಯಾದಿ ಕಾರ್ಯಗಳನ್ನು ಹಮ್ಮಿಕೊಂಡು, ಭಕ್ತಾದಿಗಳು ಇಲ್ಲಿಗೆ ಬಂದು ಈ ಪುಣ್ಯಕ್ಷೇತ್ರದ ದರುಶನ ಪಡೆಯುವ ಬಾಗ್ಯಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ

ಶ್ರೀ ವೇಣುಗೋಪಾಲಸ್ವಾಮಿ ಹಾಗೂ ಪ್ರಾಣದೇವರ ದೇವಸ್ಥಾನ ಊರಿನ

ಮಧ್ಯಭಾಗದಲ್ಲಿದೆ ದೇವಸ್ಥಾನದ ಆವರಣದೊಳಗೇ ಅಡಿಗ ಸಾಲೆ, ಸುಮಾರು ಐನೂರು ಮಂದಿ ಕುಳಿತು ಭೋಜನ ಮಾಡುವಷ್ಟು ಮಂಟಪ ನಿರ್ಮಿತವಾಗಿವೆ

ಶ್ರೀವೇಣುಗೋಪಾಲಸ್ವಾಮಿಯ ಬ್ರಹ್ಮರಥೋತ್ಸವ ಸತತವಾಗಿ ಐದು ದಿನಗಳ ಕಾಲ ನಡೆಯುತ್ತದೆ ಅಂಕುರಾರ್ಪಣದೊಂದಿಗೆ ಆರಂಭವಾಗುವ ಈ ಸಮಾರಂಭ ಶ್ರೀರಾಮನವಮಿಯಂದು, ಶ್ರೀರಾಮನವಮಿಯ ಉತ್ಸವದೊಂದಿಗೆ ಅಂತ್ಯಗೊಳ್ಳುವುದು

ರಥೋತ್ಸವದ ಹಿಂದಿನ ದಿನ ಗರುಡೋತ್ಸವ ಅನಂತರ ಅಂದೇ ಸಂಜೆ ದೇವರ ಕಲ್ಯಾಣೋತ್ಸವ ನಡೆಸಲಾಗುವುದು ಮರುದಿನ ರಥೋತ್ಸವ ಬೃಂದಾವನದಲ್ಲಿರುವ ಶ್ರೀಕೃಷ್ಣನಿಗೆ ಪಂಚಾಮೃತ ಅಭಿಷೇಕ, ಹೂವಿನ ಅಲಂಕಾರ, ಉತ್ಸವಮೂರ್ತಿಯನ್ನು ಅಲಂಕರಿಸಿ, ಗ್ರಾಮದ ಮುಂಭಾಗದಲ್ಲಿ ನಿಲ್ಲಿಸಿದ ರಥದಲ್ಲಿ ದೇವರನ್ನು ಕೂಡಿಸಿ ರಥವನ್ನೆಳೆಯುವರು, ಪಾನಕ ತುಂಬಿದ ಗಾಡಿಗಳು, ಕೋಲಾಟ, ಮಂಗಳ ವಾದ್ಯ ಇತ್ಯಾದಿಗಳೊಂದಿಗೆ, ರಥದಲ್ಲಿ ಕಂಗೊಳಿಸುವ ಶ್ರೀಕೃಷ್ಣ ರುಕ್ಮಿಣಿ ಸತ್ಯಭಾಮೆಯರ ಮೂರುತಿ, ಭಕ್ತರ ತನುಮನವನ್ನು ಸೂರೆಗೊಳ್ಳುತ್ತದೆ

ಶ್ರೀ ವೇಣುಗೋಪಾಲ ಸ್ವಾಮಿಯನ್ನು ಸಂತಾನ ವೇಣುಗೋಪಾಲ ಎಂದು ಕರೆಯುತ್ತಾರೆ ಸಂತಾನಭಾಗ್ಯ ಅಪೇಕ್ಷಿಸುವವರೇ, ರಥೋತ್ಸವ ಸಮಯದಲ್ಲಿ ಗರುಡ ಮುಷ್ಟಿ ಸೇವಿಸಿದರೆ ಸಂತಾನವಾಗುವುದು ಎಂಬುದಕ್ಕೆ ಸಾಕ್ಷ್ಯಾಧಾರಗಳಿವೆ

ಕಾಕೋಳಿನ ಆಸುಪಾಸಿನ ಗ್ರಾಮಗಳೆಂದರೆ ಶ್ಯಾನುಭೋಗ ಹಳ್ಳಿ, ಇಲ್ಲಿಯೆ ರಾಮದೇವರ ಗುಡಿ, ಹಾರೋಹಳ್ಳಿ ಪ್ರಾಣದೇವರು ಸೀತಕೆಂಪನ ಹಳ್ಳಿಯ ಆಂಜನೇಯ ಬೈರಾಪುರದಲ್ಲಿ ಪ್ರಾಣದೇವರು ಚೆನ್ನಸಂದ್ರದಲ್ಲಿ ಚೆನ್ನಕೇಶವ ದೇವಸ್ಥಾನ, ಚಳ್ಳಹಳ್ಳಿಯಲ್ಲಿ ವೇಣುಗೋಪಾಲ ಸಹಿತ ರುಕ್ಮಿಣಿ ಸತ್ಯಭಾಮರ ಗುಡಿ, ಮದಗೊಂಡನ ಹಳ್ಳಿಯಲ್ಲಿ ಪ್ರಾಣದೇವರು ಬ್ಯಾತದಲ್ಲಿ ಲಕ್ಷ್ಮಿ ದೇವಸ್ಥಾನ ಇವುಗಳ ಜೀರ್ಣೋದ್ಧಾರ ಕಾರ್ಯಕ್ಕೂ ನರಸಣ್ಣ ಸಹೋದರರು ಮಾರ್ಗದರ್ಶಕ ರಾಗಿದ್ದರು ಕಾಕೋಳಿನ ವೀರಭದ್ರೇಶ್ವರ ದೇವಸ್ಥಾನದಲ್ಲಿ ಬಸವ ಜಯಂತಿ ಗ್ರಾಮದೇವತೆ, ಬೆಂಕಿಮಾರಮ್ಮನ ಜಾತ್ರೆ ವರ್ಷಕ್ಕೊಮ್ಮೆ ನಡೆಯುತ್ತದೆ ಬೀರದೇವರ

ದೇವಸ್ಥಾನದಲ್ಲಿ ಹತ್ತು ವರ್ಷಕ್ಕೊಂದು ಬಾರಿ ಜಾತ್ರೆ ನಡೆಸುವರು ಸುಮಾರು ಐದು ಸಾವಿರ ಮಂದಿ ಈ ಜಾತ್ರೆಯಲ್ಲಿ ಭಾಗವಹಿಸುವರು

ಈ ಕಾಕೋಳು ಗ್ರಾಮ ಒಂದು ಮಾದರಿಗ್ರಾಮವೆಂದು ಸರ್ ಎಮ್ ವಿಶ್ವೇಶ್ವರಯ್ಯ ಹಾಗೂ ಮಾನ್ಯ ಮುಖ್ಯಮಂತ್ರಿಯಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರು ನುಡಿದಿದ್ದರು

ಈ ಗ್ರಾಮ ನಾಡ ಸಂಸ್ಕೃತಿಯನ್ನು ಬೆಳಗುವ, ಸಾಹಿತಿಗಳು, ನಾಟಕಗಾರರು, ಕವಿಗಳು, ಶಿಲ್ಪಿಗಳು ಅಲ್ಲದೆ ಮಂಗಳವಾದ್ಯ ನುಡಿಸುವವರು, ವಿಶ್ವವಿದ್ಯಾನಿಲಯದ ಪದವೀಧರರಿಂದ ಕೂಡಿದ್ದು ಆಗಾಗ್ಗೆ ನಾವು ಇವರೆಲ್ಲರ ಸಾಂಸ್ಕೃತಿಕ ಚಟುವಟಿಕೆಗಳನ್ನು ಕಾಣಬಹುದಾಗಿದೆ

ಇಂತಹ ಒಂದು ಗ್ರಾಮದಲ್ಲಿ ಶ್ರೀ ವೇಣುಗೋಪಾಲ ಸ್ವಾಮಿ, ಬೃಂದಾವನದಲ್ಲಿ ನೆಲೆಸಿ, ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರನ್ನು ತನ್ನೆಡೆಗೆ ಬರಮಾಡಿಕೊಂಡು ಅನುಗ್ರಹಿಸುತ್ತಿರುವನು ಇವನ ಮಹಿಮೆಯನ್ನು ಹಾಡಲು ನುಡಿಗಳು ಸಾಲದು ಹೊಗಳಲು ಪದಗಳು ಸಾಲದಾಗಿದೆ ಆದರೂ ಭಗವಂತನನ್ನೆ ಪಾಡಿ ಪೊಗಳಿ ಕೊಂಡಾಡುವುದು ಬಕುತರ ಪಾಲಿಗೆ ಮುಕುತಿ

## ಶ್ರೀ ಕೃಷ್ಣನ ಭಾವ ಸ್ಮರಣೆ

ಏಳು ರುಕ್ಮಿಣೀ ರಮಣಾ ।
ಏಳು ಯಶೋದೆ ನಂದನಾ ।
ಏಳು ಚಂದಿರವದನನೇ ।
ಏಳಯ್ಯಾ ಬೆಳಗಾಯಿತು ॥

ಎದ್ದು ಬಂದರೆ ನಿನಗೆ ಘೃತಕ್ಷೀರವನುಣಿಸುವೆ
ಬಜಬೆಣ್ಣೆಯನ್ನೀಯುವೆ
ಇದು ಸಾಲದೇನೋ ಕೃಷ್ಣಾ ॥

ಎಲ್ಲಿರುವನೋ ಕೃಷ್ಣ ಎಂಬ ಸಂಶಯ ನನಗಿಲ್ಲ
ಅಣು ಮಹತ್ತುಗಳಲ್ಲಿ ಪರಿಪೂರ್ಣನೆನಿಸಿ
ನೆನೆದವರ ಮನದಲ್ಲಿ ಇರುವೆ

ಕರೆದುದು ಸಾಲದೆಂದು ನಿಷ್ಠುರ
ಮಾಡದಿರೊ ವೃಂದಾವನದಲ್ಲಿ ನೆಲಸಿಹ
ಶ್ರೀ ವೇಣುಗೋಪಾಲ ಕೃಷ್ಣಾ

* * *

ಕೃಷ್ಣನೆಂದರೆ ಕಾಕೋಳು ಕೃಷ್ಣನಯ್ಯಾ ।
ಅದೇನು ರೂಪ ಅದೇನು ಭಾವ
ಕಾಕೋಳಿನ ಪುರಜನರಿಗಿನ್ನು ಕೊರತೆಗಳುಂಟೆ ।
ಪರಮ ದಯದಿ ತನ್ನ ನೆರಳಿನೊಳೆಲ್ಲರ
ಪೊರೆಯುತಿರುವ ನಮ್ಮ ಶ್ರೀಕೃಷ್ಣ ॥

ಕಾಕೋಳು ಭಕುತರ ಕೂಡಿಸಿ ಮುದದಲಿ ।
ಬೇಡಿದ ವರಗಳ ನೀಡುವ ದೊರೆಯು
ಕಡುಕ್ಲೇಶಗಳನು ಹೊಡೆದೋಡಿಸುವ ಧೀರನು
ಈತನ ದಯೆಗೆ ಎಣೆಯುಂಟೇ ಜಗದಿ ॥

ನಿನ್ನ ನಾಮವ ಮರೆತು ವಿಷಯಪ್ರೇಮದಿ ತೊಡಗಿ ।
ಬಳಲಿದ ಪಾಮರರಿಗೆ
ನೀನೇ ದಯತೋರೋ ।
ಶ್ರೀ ವೇಣುಗೋಪಾಲ ಕೃಷ್ಣಾ ॥

* * *

ತೋರೋ ಎನ್ನಲಿ ಕರುಣ
ಕಾಕೋಳು ಶ್ರೀಕೃಷ್ಣಾ
ನೀನೆಂತಹ ಕರುಣಾಮಯಿಯೆಂದು
ನಾವು ಬಲ್ಲೆವು ॥

ನಿನ್ನ ಮಹಿಮೆಗಳನರಿಯದೆ,
ಈ ಧರೆಯ ಭೋಗದಲಿ ಬೀಳುವ
ನಮ್ಮ ಕಣ್ಣು ತೆರೆಯಿಸೋ ತಂದೇ
ಎಂದೇ ನಿನ್ನಲಿ ಬಂದೆ ।

ಭಕುತರು ಕೈಮುಗಿದು ಕರವಲ್ಲಿ
ನಿನ್ನ ರೂಪ ತೋರುವಲ್ಲಿ
ಏಸು ದಯವೋ ನಿನ್ನಲ್ಲಿ
ಶ್ರೀ ವೇಣುಗೋಪಾಲ ಕೃಷ್ಣಾ ॥

ಶರಣು ಶರಣು ಶ್ರೀಕೃಷ್ಣಾ
ಕಾಕೋಳು ಪುರಪ್ರದಾಯಕ ।
ಶರಣು ರುಕ್ಮಿಣೀಶ
ಭಕುತರ ದಾಸ ॥

ನಿನ್ನ ಲಾವಣ್ಯ ಮೂರುತಿಯ
ನೋಡಲು ತವಕಿಸುತಿದೆ ಈ ನಯನಗಳು
ಪೇಳಲಂಜುವೆ ಕೇಳಿ ಕೋಪಿಸಬೇಡ,
ಪರಿಪರಿಯಲಿ ಈ ನರಜನ್ಮವಿತ್ತು
ನನ್ನ ಕೊರಗಿಸಬೇಡ ಶ್ರೀಕೃಷ್ಣ ॥

ಎಂತಾದರೂ ಸರಿ, ಕಾಕೋಳು ಪುರದಲಿ
ದರುಶನವೆನಗೀಯೋ ಶ್ರೀ ವೇಣುಗೋಪಾಲಕೃಷ್ಣಾ

*  *  *

ಬಿಡಿಸೋ ಬಂಧನ ಹೇ ಮಾದವ
ಬೇಡವೆಂದರೂ ನನ್ನ ಬಿಡದಿದೆ ಈ
ಸಂಸಾರ ।

ಮಿಕ್ಕ ವಿಷಯ ಬೇಡಬೇಡವೆನುತ,
ಬಯಸಿದರೂ ಮನ,
ಅತ್ತಲೇ ಸೆಳೆಯುತಿದೆ ಸಿರಿ ವ್ಯಾಮೋಹ ।

ಎಂದಿಗೆ ಈ ಲೋಕದ ಹಂಗು
ತೊಲಗಿ ನಾನಿನ್ನ ಚರಣ ದಾಸಳಾಗುವೆನೋ।
ಅಂದೇ ನಾ ಧನ್ಯೆ ಸಿರಿವರನೇ ।

ಭಕುತ ಭಕುತರೆಂದು
ಬೊಬ್ಬೆ ಹೊಡೆವೆ
ಭಕುತ ನಿನ್ನ ಕರೆದರೆ
ನೀ ಬಲ್ಲೆಯಾದರೂ ಈ ಬಿಂಕ ನಿನಗ್ಯಾಕೋ ।
ನಿನ್ನ ಪ್ರಸನ್ನ ವದನ ತೋರೋ ಎನಗೆ
ಶ್ರೀ ವೇಣುಗೋಪಾಲ ಕೃಷ್ಣಾ ॥



ಹೆಳವನಕಟ್ಟೆ ಗಿರಿಯಮ್ಮ

ಎಂಥಾಪುಣ್ಯ ಎಂಥಾ ಭಾಗ್ಯ ।
ಕಾಕೋಳು ವೇಣುಗೋಪಾಲನ ದರುಶನ ।

ಕಣಕಾಲಂದಿಗೆ ಘಲುಘಲುರೆನುತಲಿ
ಝುಣ ಝುಣ ವೇಣುನಾದದಲಿ ।
ಯದುಕುಲ ನಂದನ ಶ್ರೀಕೃಷ್ಣ ॥

ಎನ್ನ ಶಿರ ನಿನ್ನ ಚರಣದಲ್ಲಿರಲಿ
ಎನ್ನ ಮನ ನಿನ್ನ ಸ್ಮರಣೆಯಲ್ಲಿರಲಿ
ನಾ ನಿನಗೇನು ಬೇಡುವುದಿಲ್ಲ
ನೀ ಎನ್ನ ಹೃದಯ ಮಂದಿರದಲ್ಲಿ
ಅನುಗಾಲ ನಿಂದಿರೋ ಶ್ರೀಕೃಷ್ಣಾ ॥

ಏನು ಕರುಣಾನಿಧಿಯೋ ।
ಕಂತುಪಿತನೇ, ನಿನ್ನ ಎಂತು
ವರ್ಣಿಸಲಿ ।
ಪಾಲಿಸೆನ್ನನು ನಿರಂತರದಲ್ಲಿ
ಶ್ರೀವೇಣುಗೋಪಾಲ ಕೃಷ್ಣಾ

* * *

ಶ್ರೀಕಾರವೇ ಶ್ರೀ ಹರಿಯೇ ನಾದವು
ನಾದವೇ ಶ್ರೀ ಹರಿಯೇ ನಾಮವು
ನಾದ ನಾಮಗಳೆರಡೇ ಶ್ರೀ ಹರಿಯ
ಅಂಕಿತವು, ಇದು ಭಕುತರಿಗೆ ಸಮ್ಮತವು

ಹರಿಹರ ಬ್ರಹ್ಮನ ಭೇದಗಳನರಿಯದ
ಹಸುಳೆಗೆ ಹಾಕಿದ ತಂತ್ರವೇ
ಶ್ರೀ ಹರಿ ನಾಮಾಮೃತ ಮಂತ್ರವು
ನಿನ್ನ ತಂತ್ರಕೆ ತಲೆಬಾಗಿ ನಿಂತೆ
ಕರೆದೆಡೆಗೆ ನೀ ಬರುವೆಯೆಂದೇ
ನಾ ಕಾದು ನಿಂದೆ

ಹರಿನಾಮ ಒಂದೇ ಎನಗೆ
ಜೀವನವೆಂದೆ
ಎಂದಿಗೆ ನಿನ್ನ ದರುಶನ ಎನಗೆ
ತಂದೆ ಶ್ರೀ ವೇಣುಗೋಪಾಲ ಕೃಷ್ಣಾ ||

* * *

ಯಾರ ಕಂದನು ನೀನು ಹೇ ಕೃಷ್ಣಾ |
ಯಾರ ಕಂದನು ನೀನು ||

ಗರ್ಭದಲಿ ಪೊತ್ತ ಮಾತೆ
ದೇವಕಿ ದೇವಿಯೇ |
ತೋಳಪ್ಪುಗೆಯಲ್ಲಿ ನಿನ್ನ ಬೆಳೆಸಿದ
ಯಶೋದೆಯೇ ||

ಹೃದಯ ಮಂದಿರದಲ್ಲಿ ನಿನ್ನ ಪೂಜಿಪ ಭಕುತರೋ |
ಎಂತಾದರೂ ನೀ ಜಗಕೆ ಜನಕನಾದೆ |
ಇದೂ ನಿನ್ನ ಮಹಿಮೆಯೇ ಎಂದರಿಯುವೆನೋ

ಮಧುರೆಯಲಿ ಜನಿಸಿದ ನೀನು
ನಂದನದಲ್ಲಿ ಬೆಳೆದು
ಹರಿಭಕುತರನು ಅನುಗ್ರಹಿಸಲು
ಕಾಕೋಳು ಪುರಕೆ ಓಡಿ ಬಂದೆಯೇನೋ

ಏನು ಕರುಣಾನಿಧಿಯೋ,
ಹರಿ ಮತ್ತೇನು ಭಕ್ತಾಧೀನ
ನಿನ್ನ ಸ್ಮರಣೆ ಮಾತ್ರದಿಂದ
ತೊಲಗುವುವು ನಮ್ಮ ಪಾಪ
ಇಂತಿಷ್ಟೇ ಎಂದು ನೀಡದಿರು
ಕೈತುಂಬಾ ನೀಡು ಹರಿಭಕುತಿಯು
ಶ್ರೀ ವೇಣುಗೋಪಾಲ ಕೃಷ್ಣಯ್ಯ



ಹೆಳವನಕಟ್ಟೆ ಗಿರಿಯಮ್ಮ



ಶ್ರೀಮತಿ ಕಾಕೋಳು ಸರೋಜಾರಾವ್ ಇವರು ಶ್ರೀಹರಿಯ
ಪರಮಭಕ್ತೆಯಾದ ಹೆಳವನಕಟ್ಟೆ ಗಿರಿಯಮ್ಮ ಜೀವನ
ಚರಿತ್ರೆಯನ್ನು ಬರೆದು ದಾಸಸಾಹಿತ್ಯದ ಕ್ಷೇತ್ರದಲ್ಲಿ
ಮಹಿಳೆಯರ ಪಾತ್ರದ ಉತ್ತಮ ಪರಿಚಯವನ್ನು
ನಡೆಸಿದ್ದಾರೆ ಭಕ್ತಿಯ ಕ್ಷೇತ್ರದಲ್ಲಿ ಜಾತಿ, ಕುಲ, ಲಿಂಗ
ಭೇದವಿಲ್ಲದೆ ಸಕಲ ಸಜ್ಜನರೂ ಭಾಗವಹಿಸಿ ಭಗ-
-ವದನುಗ್ರಹಕ್ಕೆ ಪಾತ್ರರಾಗಬಲ್ಲರು. ಅಂತಹ ಆದರ್ಶ
ಭಕ್ತೆಯಾದ ಗಿರಿಯಮ್ಮನ ಪರಿಚಯಿಸುವ ಈ
ಕೃತಿಯನ್ನು ನಾವು ಸ್ವಾಗತಿಸಿ ಸರೋಜಾರಾವ್ ಇವರಿಂದ
ಇಂತಹ ಉತ್ತಮ ಕೃತಿಗಳು ನಿರ್ಮಾಣವಾಗಲಿ ಎಂದು
ಆಶಿಸಿ ಅವರಿಗೆ ಹರಿವಾಯುಗಳ ಅನುಗ್ರಹವನ್ನು
ಪ್ರಾರ್ಥಿಸುವೆವು.

ಇತಿ ನಾರಾಯಣ ಸ್ಮರಣೆಗಳು

ಪೇಜಾವರ ವಿಶ್ವೇಶತೀರ್ಥ ಶ್ರೀಪಾದಂಗಳವರು